2) ಭಾವಾರ್ಥ : ಗಾರ್ಗಿ : 'ಯಾಜ್ಞವಲ್ಕ್ಯ, ನಿನಗೆ ಎರಡು ಪ್ರಶ್ನೆಗಳನ್ನು ಹಾಕುತ್ತೇನೆ. ಹೇಗೆ ಒಬ್ಬ ಕಾಶೀದೇಶೀಯನು ಅಥವಾ ವೀರವಂಶೀಯನಾದ ವಿದೇಹರಾಜನು ಹೆದೆಯೇರಿಸದ ಬಿಲ್ಲಿಗೆ ಹೆದೆಯೇರಿಸಿ ಶತ್ರುಗಳಿಗೆ ಅತಿ ವ್ಯಥೆಯನ್ನುಂಟುಮಾಡುವ ಎರಡು ಶರಗಳನ್ನು ಹಿಡಿದು ಕೊಂಡು ಸಮೀಪಿಸುವನೋ ಹಾಗೆಯೇ ನಾನು ಎರಡು ಪ್ರಶ್ನೆಗಳೊಡನೆ ನಿನ್ನನ್ನು ಸಮೀಪಿಸುತ್ತೇನೆ. ನನ್ನ ಎರಡು ಪ್ರಶ್ನೆಗಳಿಗೆ ಉತ್ತರವನ್ನು ಕೊಡು. (ಯಾಜ್ಞವಲ್ಕ್ಯ :) 'ಪ್ರಶ್ನಿಸು, ಗಾರ್ಗಿ.'

ಅನ್ವಯಕ್ರಮದಲ್ಲಿ ಅರ್ಥ :

ಸಾ ಉವಾಚ ಹ, ಯಾಜ್ಞವಲ್ಕ್ಯ, ಯತ್ – ಯಾವುದು ದಿವಃ ಊರ್ಧ್ವಂ–ದ್ಯುಲೋಕದ ಮೇಲಿದೆಯೋ, ಯತ್ – ಯಾವುದು ಪೃಥಿವ್ಯಾಃ ಅವಾಕ್–ಪೃಥ್ವಿಯ ಕೆಳಗಿರುವುದೋ, ಯತ್–ಯಾವುದು ದ್ಯಾವಾ ಪೃಥಿವೀ ಅಂತರಾ–ದ್ಯುಲೋಕ ಪೃಥ್ವಿಗಳ ನಡುವೆ ಇರುವುದೋ, ಇಮೇ–(ಯಾವುದು) ಇವೆರಡೂ. ಯತ್–ಯಾವುದು ಭೂತಂ ಚ–ಭೂತವು ಭವತ್ ಚ–ವರ್ತಮಾನವು ಭವಿಷ್ಯತ್ ಚ–ಮತ್ತು ಭವಿಷ್ಯತ್ತು ಇತಿ –ಎಂದು ಆಚಕ್ಷತೇ – ಹೇಳುವರೋ ತತ್–ಅದು ಕಸ್ಮಿನ್–ಯಾವುದರಲ್ಲಿ ಓತಂ ಚ ಪ್ರೋತಂ ಚ–ಓತಪ್ರೋತವಾಗಿದೆ .ಇತಿ–ಎಂದು.

3) ಭಾವಾರ್ಥ : ಗಾರ್ಗಿ : 'ಯಾಜ್ಞವಲ್ಕ್ಯ, ಯಾವುದು ದ್ಯುಲೋಕದ ಮೇಲೆ ಪೃಥ್ವಿಯ ಕೆಳಗೆ ಇರುವುದೋ ಯಾವುದು ದ್ಯುಲೋಕ-ಪೃಥ್ವಿಗಳಾಗಿದೆಯೋ ಮತ್ತು ಅವುಗಳ ನಡುವೆ ಇರುವುದೊ ಯಾವುದನ್ನು ಭೂತ-ಭವಿಷ್ಯತ್-ವರ್ತಮಾನಗಳೆಂದು ಹೇಳುತ್ತಾರೆಯೋ ಅ (ಸೂತ್ರವು) ಯಾವುದರಿಂದ ವ್ಯಾಪ್ತವಾಗಿದೆ ?'

ಅನ್ವಯಕ್ರಮದಲ್ಲಿ ಅರ್ಥ :

[ ಸಃ–ಅವನು; ಆಕಾಶೇ–(ಅವ್ಯಕ್ತವಾದ) ಆಕಾಶದಲ್ಲಿ ಉಳಿದುದನ್ನು ಹಿಂದಿನಂತೆಯೇ ಅನ್ವಯಿಸಿಕೊಳ್ಳಬೇಕು.]

4) ಭಾವಾರ್ಥ : ಯಾಜ್ಞವಲ್ಕ್ಯ : 'ಗಾರ್ಗಿ, ಯಾವುದು

ದ್ಯುಲೋಕದ ಮೇಲೆ ಪೃಥ್ವಿಯ ಕೆಳಗೆ ಇರುವುದೋ ಯಾವುದು ದ್ಯು-ಲೋಕ-ಪೃಥ್ವಿಗಳಾಗಿದೆಯೋ ಹಾಗು ಅವುಗಳ ನಡುವೆ ಇರುವುದೋ ಯಾವುದನ್ನು ಭೂತ-ಭವಿಷ್ಯತ್-ವರ್ತಮಾನಗಳೆಂದು ಹೇಳುತ್ತಾರೆಯೋ ಆ (ಸೂತ್ರವು ಅವ್ಯಕ್ತವಾದ) ಆಕಾಶದಿಂದ ವ್ಯಾಪ್ತವಾಗಿದೆ.'

[ವ್ಯಕ್ತವಾದ ಜಗತ್ತಿಗೆ ಸೂತ್ರವೆಂದು ಹೆಸರು. ಇದು ನೀರಿನಲ್ಲಿರುವ ಪೃಥ್ವಿಧಾತುವಿನಂತೆ ಉತ್ಪತ್ತಿ ಸ್ಥಿತಿ ಪ್ರಳಯಗಳಲ್ಲಿ ಅವ್ಯಕ್ತವಾದ ಆಕಾಶದಿಂದ ವ್ಯಾಪ್ತವಾಗಿದೆ.]

ಅನ್ವಯಕ್ರಮದಲ್ಲಿ ಅರ್ಥ :

ಸಃ ಉವಾಚ ಹ, ಗಾರ್ಗಿ, ಏತತ್ ವೈ-ಇದೇ ತತ್ ಅಕ್ಷರಂ-ಆ ಅಕ್ಷರವು (ಎಂದು) ಬ್ರಾಹ್ಮಣಾಃ-ಬ್ರಾಹ್ಮಣರು ಅಭಿವದಂತಿ-ಹೇಳುತ್ತಾರೆ, [ತತ್-ಅದು] ಅಸ್ಥೂಲಂ-ಅಸ್ಥೂಲವು ಅನಣು-ಅಣುವಲ್ಲದ್ದು ಅಹ್ರಸ್ವಂ-ಅಹ್ರಸ್ವ ಅದೀರ್ಘಂ-ಅದೀರ್ಘವು ಅಲೋಹಿತಂ-ಅಲೋಹಿತವು ಅಸ್ನೇಹಂ-ಅಸ್ನೇಹವು ಅಚ್ಛಾಯಂ-ಅಚ್ಛಾಯವು ಅತಮಃ-ಅತಮಸ್ಸು ಅವಾಯು-ಅವಾಯುವು ಅನಾಕಾಶಂ-ಅನಾಕಾಶವು ಅಸಂಗಂ-ಅಸಂಗವು ಅರಸಂ-ಅರಸವು ಅಗಂಧಂ-ಅಗಂಧವು ಅಚಕ್ಷುಷ್ಕಂ-ಅಚಕ್ಷುಸ್ಸು ಅಶ್ರೋತ್ರಂ-ಅಶ್ರೋತ್ರವು ಅವಾಕ್-ಅವಾಕ್ಕು ಅಮನಃ-ಅಮನಸ್ಸು ಅತೇಜಸ್ಕಂ-ಅತೇಜಸ್ಸು ಅಪ್ರಾಣಂ-ಅಪ್ರಾಣವು ಅಮುಖಂ-ಅಮುಖವು ಅಮಾತ್ರಂ-ಅಮಾತ್ರವು ಅನಂತರಂ-ಅನಂತರವು ಅಬಾಹ್ಯಂ-ಅಬಾಹ್ಯವು, ತತ್-ಅದು ಕಿಂಚನ-ಯಾವುದನ್ನೂ ನ ಅಶ್ನಾತಿ-ತಿನ್ನುವುದಿಲ್ಲ ಕಶ್ಚನ-ಯಾವುದೂ ತತ್-ಅದನ್ನು ನ ಅಶ್ನಾತಿ-ತಿನ್ನುವುದಿಲ್ಲ.

5) ಭಾವಾರ್ಥ : ಯಾಜ್ಞವಲ್ಕ್ಯ : 'ಗಾರ್ಗಿ, ಇದೇ ಆ ಅಕ್ಷರವು[1] ಎಂದು ಬ್ರಾಹ್ಮಣರು[2] ಹೇಳುತ್ತಾರೆ : ಅದು ಅಸ್ಥೂಲವು, ಅನಣು, ಅಹ್ರಸ್ವವು, ಅದೀರ್ಘವು[3] ಅಲೋಹಿತವು[4] ಅಸ್ನೇಹವು ಅಚ್ಛಾಯವು, ಅತಮಸ್ಸು ಅವಾಯು, ಅನಾಕಾಶವು, ಅಸಂಗವು, ಅರಸವು, ಅಗಂಧವು, ಅಚಕ್ಷುಸ್ಸು[6] ಅಶ್ರೋತ್ರವು[7] ಅವಾಕ್ಕು, ಅಮನಸ್ಸು, ಅತೇಜ

ಸ್ಸ, ಅಪ್ರಾಣವು, ಅಮುಖವು, ಅಮಾತ್ರವು[8], ಅನಂತರವು, ಅಬಾಹ್ಯವು. ಅದು ಯಾವುದನ್ನೂ ತಿನ್ನುವುದಿಲ್ಲ. ಅದನ್ನು ಯಾವುದೂ ತಿನ್ನುವುದಿಲ್ಲ[9].

[ 1 ನಾಶವಾಗದೆ ಅಥವಾ ಪರಿಣಾಮವನ್ನು ಹೊಂದದೆ ಇರುವುದು.

2 ಬ್ರಹ್ಮಜ್ಞಾನಿಗಳು : 'ಬ್ರಾಹ್ಮಣರು ಹೇಳುತ್ತಾರೆ.' ಎಂದು ಹೇಳಿದುದರಿಂದ 'ಅವಾಚ್ಯವನ್ನು ಹೇಳುವುದು' ಮತ್ತು 'ಅರಿಯೆನು ಎಂದು ಹೇಳುವುದು' ಎಂಬ ಎರಡು ದೋಷಗಳಿಂದ ಯಾಜ್ಞವಲ್ಕ್ಯನು ತನ್ನನ್ನು ಬಿಡಿಸಿಕೊಂಡಿದ್ದಾನೆ.

3 ಪರಿಮಾಣವನ್ನು ನಿರಾಕರಿಸುವ ಈ ನಾಲ್ಕು ವಿಶೇಷಣಗಳಿಂದ ದ್ರವ್ಯದ ಗುಣಗಳನ್ನೆಲ್ಲ ನಿರಾಕರಿಸಿದಂತೆಯೇ ಆಯಿತು. ಅಕ್ಷರವು ದ್ರವ್ಯವಲ್ಲ ಎಂದು ಅರ್ಥ.

4 ಲೋಹಿತ ಎಂದರೆ ಕೆಂಪು ಬಣ್ಣ : ಇದು ಅಗ್ನಿಯ ಗುಣ.

5 ಇಲ್ಲಿ ಸ್ನೇಹವೆಂದರೆ ತೇವ ಅಥವಾ ಆರ್ದ್ರತೆ.

6 ಅಕ್ಷರಕ್ಕೆ ಚಕ್ಷುವೆಂಬ ಕರಣವಿಲ್ಲ. 'ಕಣ್ಣಿಲ್ಲದೆ ನೋಡುತ್ತದೆ.' ಪಶ್ಯತ್ಯಚಕ್ಷುಃ ಎಂದು ಇನ್ನೊಂದು ಶ್ರುತಿಯು ಹೇಳುತ್ತದೆ.

7 'ಕಿವಿಯಿಲ್ಲದೆ ಕೇಳುತ್ತದೆ.' ಸ ಶೃಣೋತ್ಯಕರ್ಣಃ.

8 ಅಳತೆಯಿಲ್ಲದುದು.

9 ಅಕ್ಷರ ಅಥವಾ ಬ್ರಹ್ಮವು ಏಕಮೇವಾದ್ವಿತೀಯವಾದುದರಿಂದ ಸರ್ವವಿಶೇಷಣರಹಿತವಾಗಿದೆ. ಆದಕಾರಣ ಯಾವುದರಿಂದ ಯಾವುದನ್ನು ವಿಶೇಷಿಸಬಹುದು ? ]

ಅನ್ವಯಕ್ರಮದಲ್ಲಿ ಅರ್ಥ : ಗಾರ್ಗಿ, ಏತಸ್ಯ ವಾ ಅಕ್ಷರಸ್ಯ–ಈ ಅಕ್ಷರದ ಪ್ರಶಾಸನೇ–ಪ್ರಶಾಸನದಲ್ಲಿ ಸೂರ್ಯಚಂದ್ರಮಸೌ – ಸೂರ್ಯಚಂದ್ರರು ವಿಧೃತೌ ತಿಷ್ಠತಃ –ವಿಧೃತರಾಗಿರುತ್ತಾರೆ. ಎಂದರೆ ಸ್ವಸ್ಥಾನದಲ್ಲಿ ನಿಲ್ಲಿಸಲ್ಪಟ್ಟಿರುತ್ತಾರೆ, ದ್ಯಾವಾಪೃಥಿವ್ಯೌ – ದ್ಯುಲೋಕಪೃಥ್ವಿಗಳು ವಿಧೃತೇ ತಿಷ್ಠತಃ – ನಿಲ್ಲಿಸಲ್ಪಟ್ಟಿರುತ್ತವೆ, ನಿಮೇಷಾ – ನಿಮಿಷಗಳು ಮುಹೂರ್ತಾಃ – ಮುಹೂರ್ತಗಳು ಅಹೋರಾತ್ರಾಣಿ

ಅಹೋರಾತ್ರಿಗಳು ಅರ್ಧಮಾಸಾಃ-ಪಕ್ಷಗಳು ಮಾಸಾಃ - ತಿಂಗಳುಗಳು ಋತವಃ-ಋತುಗಳು ಸಂವತ್ಸರಾಃ-ಸಂವತ್ಸರಗಳು ಇತಿ-ಇವೆಲ್ಲ ವಿಧೃತಾಃ ತಿಷ್ಠಂತಿ - ನಿಲ್ಲಿಸಲ್ಪಟ್ಟಿವೆ, ಶ್ವೇತೇಭ್ಯಃ ಪರ್ವತೇಭ್ಯಃ - ಶ್ವೇತಪರ್ವತ ಗಳಿಂದ ಪ್ರಾಚ್ಯಃ ನದ್ಯಃ-ಪೂರ್ವವಾಹಿನಿಗಳಾದ ನದಿಗಳು ಅನ್ಯಾಃ ಪ್ರತೀ-ಚ್ಯಃ - ಪಶ್ಚಿಮವಾಹಿನಿಗಳಾದ ಇತರ (ನದಿಗಳು) ಅನ್ಯಾಃ -ಮತ್ತೆ ಕೆಲವು (ನದಿಗಳು) ಯಾಂ ಯಾಂ ದಿಶಂ ಅನು-ಆಯಾ ದಿಕ್ಕುಗಳಲ್ಲಿ ಸ್ಯಂದಂತಿ - ಹರಿಯುತ್ತಿರುತ್ತವೆ, ಮನುಷ್ಯಾಃ - ಮನುಷ್ಯರು ದದತಃ-ದಾನಿಗಳನ್ನು ಪ್ರಶಂಸಂತಿ- ಹೊಗಳುತ್ತಾರೆ, ದೇವಾಃ-ದೇವತೆಗಳು ಯಜಮಾನಂ - ಯಜಮಾನನನ್ನು (ಅವಲಂಬಿಸಿರುವರು). ಪಿತರಃ-ಪಿತೃಗಳು ದರ್ವೀಂ-ದರ್ವೀ ಹೋಮವನ್ನು ಅನ್ವಾಯತ್ತಾಃ-ಅವಲಂಬಿಸಿರುತ್ತಾರೆ. [ಏತಸ್ಯ-ವಾ ಅಕ್ಷರಸ್ಯ ಎಂದು ಬಂದಾಗಲೆಲ್ಲ ಮೊದಲಿನಂತೆಯೇ ಅನ್ವಯಿಸಿಕೊಳ್ಳ ಬೇಕು.]

6) ಭಾವಾರ್ಥ : (ಯಾಜ್ಞವಲ್ಕ್ಯ) 'ಈ ಅಕ್ಷರದ[1] ಶಾಸನ-ದಿಂದಲೇ, ಗಾರ್ಗಿ, ಸೂರ್ಯಚಂದ್ರರು[2] ತಮ್ಮ ಸ್ಥಾನಗಳಲ್ಲಿ ನಿಲ್ಲಿಸಲ್ಪಟ್ಟಿ ರುತ್ತಾರೆ, ಈ ಅಕ್ಷರದ ಪ್ರಶಾಸನದಿಂದಲೇ, ಗಾರ್ಗಿ, ದ್ಯುಲೋಕಪೃಥ್ವಿ ಗಳು ತಮ್ಮ ಸ್ಥಾನಗಳಲ್ಲಿ ನಿಲ್ಲಿಸಲ್ಪಟ್ಟಿರುತ್ತವೆ, ಈ ಅಕ್ಷರದ ಪ್ರಶಾಸನ ದಿಂದಲೇ, ಗಾರ್ಗಿ, ನಿಮಿಷಗಳು ಮುಹೂರ್ತಗಳು ಅಹೋರಾತ್ರಿಗಳು ಪಕ್ಷಗಳು ಮಾಸಗಳು ವರ್ಷಗಳು ತಮ್ಮ ಸ್ಥಾನಗಳಲ್ಲಿ ನಿಲ್ಲಿಸಲ್ಪಟ್ಟಿರುತ್ತವೆ, ಈ ಅಕ್ಷರದ ಶಾಸನದಿಂದಲೇ, ಗಾರ್ಗಿ, ಕೆಲವು ನದಿಗಳು ಪೂರ್ವವಾಹಿನಿ ಗಳಾಗಿಯೂ, ಇನ್ನು ಕೆಲವು ಪಶ್ಚಿಮವಾಹಿನಿಗಳಾಗಿಯೂ, ಮತ್ತೆ ಕೆಲವು ಆಯಾ ದಿಕ್ಕುಗಳಲ್ಲಿಯೂ ಹರಿಯುತ್ತಿರುತ್ತವೆ, ಈ ಅಕ್ಷರದ ಶಾಸನದಿಂದ ಲೇ, ಗಾರ್ಗಿ, ಮನುಷ್ಯರು ದಾನಿಗಳನ್ನು[3] ಹೊಗಳುತ್ತಾರೆ. ದೇವತೆಗಳು ಯಜಮಾನನನ್ನೂ ಪಿತೃಗಳು ದರ್ವೀ ಹೋಮವನ್ನೂ[4] ಅವಲಂಬಿಸಿರು ತ್ತಾರೆ.'

[ಅನೇಕ ವಿಶೇಷಣಗಳ ಪ್ರತಿಷೇಧದಿಂದ ಅಕ್ಷರದ ಅಸ್ತಿತ್ವವನ್ನು ಶ್ರುತಿಯು ಪ್ರತಿಪಾದಿಸಿತು. ಆದರೂ ಲೋಕದೃಷ್ಟಿಯಿಂದ ಅಕ್ಷರದ

ಅಸ್ತಿತ್ವವನ್ನು ಪ್ರತಿಪಾದಿಸಲು ಶ್ರುತಿಯು ಅನುಮಾನವನ್ನು ಈಗ ಉದಾಹರಿಸುತ್ತದೆ.

1 ಸಾಕ್ಷಾತ್-ಅಪರೋಕ್ಷವಾಗಿರುವ ಅಶನಾಯಾದಿಧರ್ಮಾತೀತವಾದ ಬ್ರಹ್ಮದ ಶಾಸನದಿಂದ.

2 ಸೂರ್ಯಚಂದ್ರಾದಿಗಳ ಸೃಷ್ಟಿ ಮತ್ತು ಗತಿ ಇವುಗಳಿಂದ ಇವುಗಳ ಸೃಷ್ಟಿಕರ್ತೃವಾದ ಬ್ರಹ್ಮದ ಅಸ್ತಿತ್ವವು ಸಿದ್ಧವಾಗುತ್ತದೆ.

3 ದಾನಿಗೆ ಫಲವನ್ನು ಕೊಡುವವನು ಇಲ್ಲದಿದ್ದರೆ ದಾನದ ಪ್ರಶಂಸೆಯನ್ನು ಯಾರೂ ಮಾಡುತ್ತಿರಲಿಲ್ಲ. ಏಕೆಂದರೆ ದಾನಕ್ರಿಯೆ ದಾನಿ ದಾನ ಮತ್ತು ದಾನವನ್ನು ತೆಗೆದುಕೊಳ್ಳುವವನು ಇವೆಲ್ಲವೂ ನಶ್ವರವಾದುವುಗಳು. ದಾನಿಗೂ ದಾನಫಲಕ್ಕೂ ಕರ್ಮಫಲವನ್ನು ಕೊಡಿಸುವವನು ಈಶ್ವರನೆಂದು. ಇದರಿಂದ ಸಿದ್ಧವಾಗುತ್ತದೆ.

4 ಯಾವುದಕ್ಕೂ ಅಂಗವಾಗದ ಮತ್ತು ಅಂಗರಹಿತವಾದ ಒಂದು ಹೋಮ. ]

4. ಕ) ಪ್ರಶ್ನೋತ್ತರ :

1) ಗಾರ್ಗಿಯು ಯಾಜ್ಞವಲ್ಕ್ಯನನ್ನು ಕೇಳಿದುದೇನು ? ಯಾಜ್ಞವಲ್ಕ್ಯನು ಕೊಟ್ಟ ಉತ್ತರವೇನು ?

2) ಗಾರ್ಗಿ – ಯಾಜ್ಞವಲ್ಕ್ಯರ ತಾತ್ತ್ವಿಕ ವಿವಾದವನ್ನು ಕುರಿತು ಬರೆಯಿರಿ.

3) ಗಾರ್ಗಿ – ಯಾಜ್ಞವಲ್ಕ್ಯ ಸಂವಾದವನ್ನು ಸಂಗ್ರಹಿಸಿರಿ.

ಉತ್ತರ : (ಸೂ : ಮೇಲಿನ ಪಾಠವಿವರಣೆ (ಭಾವಾರ್ಥ ಮಾತ್ರ) ಯನ್ನು ಅವತರಣಿಕೆಯೊಂದಿಗೆ ಬರೆಯಿರಿ.)

4) ಉಪನಿಷತ್ತು ಎಂದರೇನು ? ಉಪನಿಷತ್ತುಗಳು ಸಂಖ್ಯೆಯಲ್ಲಿ ಎಷ್ಟು ? ಉಪನಿಷತ್ – ಶಬ್ದದ ವ್ಯುತ್ಪತ್ತಿ ಯಾವುದು ? ಅವರ ಭಾಷಾ ಶೈಲಿ ಹೇಗಿದೆ ?

ಉತ್ತರ : (ಸೂ : ಮೇಲೆ ವಿವರಿಸಲಾಗಿದೆ. ಮೊದಲ ಪಾಠದ ಅಂಶವನ್ನು ಗಮನಿಸಿರಿ.)

5) 'ಬೃಹದಾರಣ್ಯಕೋಪನಿಷತ್' -- ಟಿಪ್ಪಣಿ ಬರೆಯಿರಿ.

ಉತ್ತರ : (ಸ್ಥೂ : ಉಪನಿಷತ್ತುಗಳು ಎಂಬ ಭಾಗ ಬರೆಯಿರಿ)

ಖ) ಸಂದರ್ಭ ವಾಕ್ಯಗಳು : [ ಸೂಚನೆ : ಮೊದಲು ಈ ಅಂಶವನ್ನು ಬರೆಯಿರಿ : ಈ ವಾಕ್ಯಾಂಶವನ್ನು , ಬೃಹದಾರಣ್ಯಕೋಪನಿಷತ್ತಿನ 'ಗಾರ್ಗೀ – ಯಾಜ್ಞವಲ್ಕ್ಯ ಸಂವಾದ' ದಿಂದ ಆರಿಸಲಾಗಿದೆ. ]

1) 'न वै जातु युष्माकमिमं कश्चित् ब्रह्मोद्यं जेतेति ।'
(ಉತ್ತರ : ಭಾವಾರ್ಥ 1 ನೋಡಿ ಬರೆಯಿರಿ)

2) एवमेवाहं द्वाभ्यां प्रश्नाभ्यां उपोदस्थाम् ।
(ಉತ್ತರ : ಭಾವಾರ್ಥ 2 ನೋಡಿ ಬರೆಯಿರಿ)

5. ವ್ಯಾಕರಣಾಂಶಗಳು :

ಕ) ಕ್ರಿಯಾರೂಪಗಳು : ರೂಪ ಗುರುತಿಸಿ : 1) उवाच – ವಚ್ ಧಾತುವಿನ ಲಿಟ್ ರೂಪ, ಪ್ರಥಮ ಪುರುಷ, ಏಕವಚನ.

2) प्रक्ष्यामि – ಪೃಚ್ಛ್ ಧಾತುವಿನ ಲೃಟ್ (ಭವಿಷ್ಯತ್) ರೂಪ, ಉತ್ತಮ ಪುರುಷ. ಏಕವಚನ. 3) वक्ष्यति – ವಚ್ ಧಾತುವಿನ ಲೃಟ್ ರೂಪ, ಪ್ರಥಮ ಪುರುಷ, ಏಕವಚನ. 4) पृच्छ – ಪೃಚ್ಛ್ ಧಾತುವಿನ ಲೋಟ್ ರೂಪ, ಮಧ್ಯಮ ಪುರುಷ, ಏಕವಚನ. 5) उत्तिष्ठेत् – ಸ್ಥಾ ಧಾತುವಿನ ವಿಧಿಲಿಙ್ ರೂಪ, ಪ್ರಥಮ ಪುರುಷ, ಏಕವಚನ.

6) आचक्षते – ಆ + ಚಕ್ಷ್ ಧಾತುವಿನ ಲಟ್ ರೂಪ, ಪ್ರಥಮ ಪುರುಷ ಬಹುವಚನ. 7) ददत: – ದಾ ಧಾತುವಿನ ಶತೃ ಪ್ರತ್ಯಯಾಂತ ವರ್ತಮಾನ ಕೃದಂತ ರೂಪ.

ಖ) ಸಮಾಸಗಳು :

1) उज्ज्यम् — उद्गता ज्या यस्य तत्
(ಬಹುವ್ರೀಹಿ ಸಮಾಸ)

2) अधिज्यं — अधिगता ज्या यस्य तत्
(ಬಹುವ್ರೀಹಿ ಸಮಾಸ)

ಧಾತುವಿನ ಣಿಜಂತ ಲಟ್ ಲಕಾರ, ಮಧ್ಯಮ ಪುರುಷ, ಏಕವಚನ.

3) ಸಮಾಸಗಳು :

1. अनेकविधपटरचनारञ्जितानि – अनेकविधेषु पटेषु रचना:, ताभि:, रञ्जितानि ।
(ಕರ್ಮಧಾರಯ, ಸಪ್ತಮೀ ತತ್ಪುರುಷ)

2. महर्द्धिसम्पन्ना: – महती ऋद्धि: महर्द्धि:, तया सम्पन्ना: (ತೃತೀಯಾ ತತ್ಪುರುಷ)

3. कृतगृहोत्कण्ठ: –– गृहे उत्कण्ठा गृहोत्कण्ठा, कृता गृहोत्कण्ठा येन स: ।
(ಸಪ್ತಮೀ ತತ್ಪುರುಷ, ಬಹುವ್ರೀಹಿ)

4. वधूरिव– पुत्रस्य पत्नी वधू:, सा इव
(ಕರ್ಮಧಾರಯ)

5. उपभुक्तधन: – उपभुक्तं धनं येन स: ।
(ಬಹುವ್ರೀಹಿ ಸಮಾಸ)

6. विस्मितमन: – विस्मितं मन: यस्य स: ।
(ಬಹುವ್ರೀಹಿ)

7. रुजाभिभूत: – रुजया अभिभूत:
(ತೃತೀಯಾ ತತ್ಪುರುಷ)

8. कृतोपवास: – कृत: उपवास: येन स: ।
(ಬಹುವ್ರೀಹಿ)

9. उद्धारकविधि:– उद्धारकं ऋणमुक्ति: तस्य विधि: । (ಷಷ್ಠೀ ತತ್ಪುರುಷ ಸಮಾಸ)

10. दत्तभुक्तफलं – दत्तं भुक्तं च फलं यस्य तत्
(ಬಹುವ್ರೀಹಿ ಸಮಾಸ)

6. ಕಠಿಣಪದಗಳ ಅರ್ಥ :

अधिष्ठाने – ಪಟ್ಟಣದಲ್ಲಿ कौलिकः – ನೇಕಾರ उपार्जनाय – ಸಂಪಾದಿಸಲು वटस्कन्धम्–ಆಲದಕೊಂಬೆಯುನ್ನು सुवर्णसन्धि–ಒಳ್ಳೆಯ ಅವಕಾಶ विसूचिका–ಉದರಶೂಲೆ (ಹೊಟ್ಟೆನೋವು) दत्तभुक्तधनम् –ಕೊಟ್ಟ-ಉಪಭೋಗಿಸಿದ ಹಣ

## ಪಾಠ : 5 स तिष्ठतु पुरे मम

## [ ಅವನು ನನ್ನ ಪಟ್ಟಣದಲ್ಲಿ ವಾಸಮಾಡಲಿ ]

1. ಅವತರಣಿಕೆ : ಭೋಜರಾಜನ ಧಾರಾ ನಗರವು ಸಾಮಾನ್ಯ ನಿಂದ ಅಸಾಮಾನ್ಯನವರೆಗೆ ತುಂಬಿತ್ತು. ಅವನ ಪಟ್ಟಣದಲ್ಲಿ ಅವಿದ್ಯ ಇರಲಿಲ್ಲ. ಜನಸಾಮಾನ್ಯನೂ ಸಂಪೂರ್ಣ ಜ್ಞಾನಿಯೂ, ವಾಗ್ವಿಲಾಸಿಯೂ ಪಾಂಡಿತ್ಯವುಳ್ಳವನೂ ಆಗಿದ್ದನು. ಎಂದು ತಿಳುಹಿಸುತ್ತದೆ– ಈ ಲೇಖನ.

2. ಭೋಜಪ್ರಬಂಧ (ಟಿಪ್ಪಣಿ) : ಬಲ್ಲಾಳಸೇನನಿಂದ ವಿರಚಿತ ವಾದ 'ಭೋಜಪ್ರಬಂಧವು' ಸಂಸ್ಕೃತಸಾಹಿತ್ಯದ ವಿಶಿಷ್ಟ ಕೃತಿಗಳಲ್ಲಿ ಒಂದು ಬಲ್ಲಾಳಸೇನನು ಕ್ರಿ. ಶ 16 ನೇ ಶತಮಾನದಲ್ಲಿ ಜೀವಿಸಿದ್ದನು. 'ಭೋಜಪ್ರಬಂಧ'ದಲ್ಲಿ ಎರಡು ಭಾಗಗಳಿವೆ. ಪ್ರಥಮ ಭಾಗದಲ್ಲಿ, ಮುಂಜನಿಂದ ಭೋಜನಿಗೆ ರಾಜ್ಯಪ್ರಾಪ್ತಿಯೆಂತಾಯಿತು ಎಂಬುದನ್ನು ವಿವರಿಸಲಾಗಿದೆ. ಎರಡನೆಯ ಭಾಗದಲ್ಲಿ ಭೋಜನ ರಾಜ್ಯಭಾರ, ವಿದ್ವತ್ ಮಾನ್ಯತೆ ಮುಂತಾದವುಗಳನ್ನು ನಿರೂಪಿಸಲಾಗಿದೆ. ಭೋಜನ ಸಭಾ ಸ್ಥಾನದಲ್ಲಿ ಕಾಳಿದಾಸ, ಭವಭೂತಿ, ಬಾಣ, ದಂಡಿ ಮುಂತಾದ ನವರತ್ನ ಗಳೆಂದು ಪ್ರಸಿದ್ಧರಾದ ಕವಿಗಳಿದ್ದರೆಂದು ಹೇಳಲಾಗಿದೆ.

3. ಪಾಠಸಂಕ್ಷೇಪ :

ಅವತರಣಿಕೆ : ಈ ಲೋಕದಲ್ಲಿ 'ಆಶ್ರಯ' ಎಂಬ ಮಾತು ಬಹು ದೊಡ್ಡದು. ಆಶ್ರಯವಿಲ್ಲದೆ, ಆಶ್ರಿತನು ಬಾಳಲಾರನು. ಆಶ್ರಯವಿಲ್ಲನೆ ಪಂಡಿತ, ಹೆಂಗಸು, ಬಳ್ಳಿ ಈ ಮೂರೂ ಬದುಕಲಾರವು. ಪಂಡಿತನಿಗೆ

ರಾಜಾಶ್ರಯ ಬೇಕು, ಹೆಂಗಸಿಗೆ ಬಾಲ್ಯದಲ್ಲಿ ತಂದೆ ತಾಯಿ. ಯೌವನದಲ್ಲಿ ಪತಿ, ವೃದ್ಧಾಪ್ಯದಲ್ಲಿ ಮಕ್ಕಳು ರಕ್ಷಕರಾಗಿರಬೇಕು. ಬಳ್ಳಿಗೆ ಮರದ ಆಶ್ರಯ ಅನಿವಾರ್ಯ. ಭೋಜರಾಜನು ವಿದ್ವಾಂಸರು, ಕವಿಗಳ ಆಶ್ರಯದಾತನಾಗಿದ್ದನು. ಈತನ ಕಾಲದಲ್ಲಿ ಸಮಸ್ತ ಧಾರಾನಗರವು ವಿದ್ಯಾವಂತರಿಂದ ಕೂಡಿತ್ತು. ಅವಿದ್ಯೆ ಎಂಬುದೇ ಅಲ್ಲಿರಲಿಲ್ಲ ಎಂಬ ಅಂಶ 'ಸ ತಿಷ್ಠೈತು ಪುರೇ ಮಮ' ಕಥೆಯಲ್ಲಿ ಉಕ್ತವಾಗಿದೆ.

ಪಾಠಸಂಕ್ಷೇಪ: ಧಾರಾನಗರದ ಅರಸು ಭೋಜನ ನಗರ ವಿದ್ಯಾವಂತನಗರವೆನಿಸಿತ್ತು. ಇಲ್ಲಿ ಅವಿದ್ಯೆಯೆಂಬುದೇ ಇರಲಿಲ್ಲ. ರಾಜನೂ ಸಹ ಸಕಲ ಗುಣ ಪರಿಪೂರ್ಣನಾಗಿ. ವಿದ್ವತ್ತು, ವಿದ್ವಾಂಸರಿಗೆ ಆಶ್ರಯದಾತನಾಗಿದ್ದನು.

75
84

ಒಮ್ಮೆ ಕಾಳಿದಾಸ ಮಹಾಕವಿಯು, ರಾಜಾಸ್ಥಾನಕ್ಕೆ ಬಂದನು. ಮಹಾರಾಜನು ಕವಿವರ್ಯನನ್ನು ಆಲಿಂಗಿಸಿ ಸನ್ಮಾನಿಸಿದನು ಮಹಾಕವಿಯು ಸಂಧ್ಯಾಕಾಲವನ್ನು ವರ್ಣಿಸಿದನು ರಾಜಾಜ್ಞೆಯಿಂದ: "ಈ ಸಂಧ್ಯಾಕಾಲದಲ್ಲಿ, ದುರ್ವ್ಯಸನಗಳಲ್ಲಿ (ಅಪಚಾರ, ಅವಿದ್ಯೆ, ಅಸಂಗತಿ, ಅಸಭ್ಯತೆ, ಅವ್ಯವಹಾರ ಮುಂತಾದ) ಇರುವ ಸದ್ವಿದ್ಯೆಯು ಹೇಗೆ ಸರ್ವನಾಶವನ್ನು ಹೊಂದುತ್ತದೋ, ಅದೇ ರೀತಿ ಕಮಲಗಳ ಕಾಂತಿಯು ಕ್ಷಯಿಸುತ್ತದೆ. ದುಂಬಿಗಳ ಸಮೂಹವು, ಅಸ್ಥಾನದಲ್ಲಿ ವಾಸಿಸುವವರಾದ ಸದ್ಗುಣಿಗಳು ದೈನ್ಯವನ್ನು ಹೊಂದುವಂತೆ ಮಕರಂದ ಪಾನ ದೊರೆಯದೆ ಬಳಲುತ್ತದೆ. ಈ ಅಂಧಕಾರವು, ಕೆಟ್ಟ ರಾಜನ ರಾಜ್ಯದ ಪ್ರಜೆಗಳು ಪೀಡಿತರಾಗುವಂತೆ ಲೋಕದಲ್ಲಿ ಪಸರಿಸಿ ಅದನ್ನು ಪೀಡಿಸುತ್ತಿದೆ. ಕಣ್ಣುಗಳು ಕತ್ತಲಿನ ದೆಸೆಯಿಂದ ಕಾಣುತ್ತಿಲ್ಲವು. ಜಿಪುಣನ ಸಂಪತ್ತು ಬಚ್ಚಿಟ್ಟು ಕಾಣದ ತೆರನಂತೆ ದೃಷ್ಟಿಯ ಸ್ಥಿತಿಯಾಗಿದೆ. ಯಾವುದೂ ಕಾಣದಂತೆ ಕತ್ತಲು, ಜಗತ್ತನ್ನು ಆವರಿಸುತ್ತ ಬರುತ್ತಿದೆ."

ಇದೇ ಸಮಯದಲ್ಲಿ, ದ್ರಾವಿಡದೇಶದಿಂದ ರಾಜಾಶ್ರಯವನ್ನು ಆಶಿಸಿ ಬಂದ ಲಕ್ಷ್ಮೀಧರಕವಿಯು ಭೋಜರಾಜನ ಗುಣಾತಿಶಯಗಳನ್ನು

ಯಥಾರ್ಥವಾಗಿ ಹೊಗಳಿದನು : "ವಜ್ರಾಯುಧಧಾರಿಯಾದ ಇಂದ್ರನಂತೆ, ಆಕಾಶದ ಮಧ್ಯೆ ಬೆಳಗುವ ಪ್ರಖರತೇಜೋಮಯನಾದ ಸೂರ್ಯದೇವನಂತೆ, ಸಮುದ್ರದ ಗರ್ಭದಲ್ಲಿ ಅಡಗಿರುವ ಬಾಡಬಾಗ್ನಿಯಂತೆ ಈ ಪೃಥ್ವಿಯಲ್ಲಿ ಭೋಜಮಹಾರಾಜನ ಪ್ರತಾಪವು ಪ್ರಸರಿಸಿ ವಿಜೃಂಭಿಸುತ್ತಿದ್ದು, ಭೂಮಿಯ ಬೇರೆ ರಾಜ-ಮಹಾರಾಜರು ಪರಮಾಣುವಿನಂತೆ (ಬಹುಸೂಕ್ಷ್ಮರಾಗಿ) ಕಣ್ಣಿಗೆ ಕಾಣದವರಾಗಿದ್ದಾರೆ."

ಈ ಕವೀಶ್ವರನು, ವಾಸಿಸಲು ಒಂದು ಗೃಹವನ್ನು ಯಾಚಿಸಿದನು. ರಾಜನಿಂದ ಆಜ್ಞಪ್ತನಾದ ಮಂತ್ರಿಯು, ಯಾರು ಅವಿದ್ಯಾವಂತರೋ ಅಂಥವನನ್ನು ಹೊರದೂಡಿ, ಅವನ ಮನೆಯನ್ನು ಈ ವಿದ್ವಾಂಸನಿಗೆ ಕೊಡಿಸಲು ಯೋಚಿಸಿದನು.

ಮಂತ್ರಿಯು, ಓರ್ವ ನೇಕಾರನಲ್ಲಿಗೆ ಬಂದು, ನೀನು ಮನೆಯನ್ನು ಬರಿದುಮಾಡಿ ಬಿಟ್ಟುಕೊಡೆಂದು ಅಪ್ಪಣೆ ಮಾಡಿದನು. ಅವನು ರಾಜನಲ್ಲಿಗೆ ಬಂದು ತನ್ನ ಕಾವ್ಯಪ್ರತಿಭೆಯನ್ನು ವ್ಯಕ್ತಪಡಿಸಿದನು.

ಮಹಾರಾಜನ ಆಕ್ಷೇಪಣೆಗೆ ಸಾಧು (ಯೋಗ್ಯವಾದ)ಉತ್ತರವನ್ನು ಕೊಟ್ಟನು. ಈ ಸಂದರ್ಭದಲ್ಲೇ ಒಬ್ಬ ಕುಂಬಾರನ ಪತ್ನಿ ಬಂದು, ಆಕೆಯ ಗಂಡನಿಗೆ ಭೂಮಿಯಲ್ಲಿ ರತ್ನಮುತ್ತುವಜ್ರವೈಡೂರ್ಯಗಳ ಕುಂಭವೊಂದು ದೊರೆತ ವಿಚಾರವನ್ನು ಶ್ಲೋಕರೂಪದಲ್ಲಿ ವಿವರಿಸಿದಳು. ಮಹಾರಾಜನು, ಭೂಮಿಯ ಆ ಕುಂಭವನ್ನು ತೆಗೆಸಿ ನೋಡಿ, ಅದರ ಬಗೆಗೆ ಕುಂಬಾರನನ್ನು ಕೇಳಿದನು. ಆತನು ವೈಭವೋಪೇತವಾದ ವಾಕ್ಸರಣಿಯಲ್ಲಿ ಮಹಾರಾಜಚಂದ್ರನನ್ನು ಕಾಣಲು ಆಕಾಶದ ನಕ್ಷತ್ರಗಳು ಈ ರೂಪದಲ್ಲಿ ಬಂದಿವೆ ಎಂದನು. ಹೀಗೆ ಮಹಾರಾಜ ಭೋಜನ ಧಾರಾನಗರವು ವಿದ್ವತ್ಪೂರ್ಣತೆಯ ನಗರವಾಗಿತ್ತು.

4. ಪ್ರಶ್ನೋತ್ತರ :

1) 'यो विद्वान् स तिष्ठतु पुरे मम' —
ಈ ಮಾತನ್ನು, ಹೇಗೆ ಸಮರ್ಥಿಸಲಾಗಿದೆ ?

S. Narayanan
Ist Year P.U.C. "B"
G.J.C.
Nagamangala



2) ಭೋಜರಾಜನ ಪಟ್ಟಣದಲ್ಲಿ ವಿದ್ವತ್ಪ್ರತಿಭೆಯಿಂದ ಕೂಡಿದ್ದ ರೆಂಬುದು ಹೇಗೆ ವ್ಯಕ್ತವಾಗಿದೆ ?

ಉತ್ತರ : (ಪಾಠಸಾರವನ್ನು ಬರೆಯಿರಿ)

3) 'ಕಾಳಿದಾಸನು ಬಣ್ಣಿಸಿದ ಸಂಧ್ಯಾವರ್ಣನೆ' ಟಿಪ್ಪಣಿ ಬರೆಯಿರಿ:

[ ಸೂಚನೆ : 2, 5 ಮತ್ತು 6 ನೇ ಶ್ಲೋಕಗಳ ಭಾವವಿವರಣೆಯನ್ನು ಈ ಮುಂದೆ ಕೊಡಲಾಗಿದೆ. ಈ ಪಾಠದ ಪ್ರಶ್ನೆಗಳಿಗೆ ಉತ್ತರಿಸುವಾಗ ಈ ವಿವರಣೆಯನ್ನು ಸಮಯೋಚಿತವಾಗಿ ಉಪಯೋಗಿಸಿಕೊಳ್ಳಿ]

2) ಭೋಜಮಹಾರಾಜನ ಅಪ್ಪಣೆಯಂತೆ, ಕಾಳಿದಾಸ ಮಹಾಕವಿಯು ಸಂಧ್ಯಾಕಾಲವನ್ನು ಚೇತೋಹಾರಿಯಾಗಿ ಬಣ್ಣಿಸಿದ್ದಾನೆ, ಅದು ಇಂತಿದೆ : " ಈ ಸಂಧ್ಯಾಕಾಲವು ಜಗತ್ತನ್ನು ತನ್ನ ಸುಳಿಗೆ ಸಿಕ್ಕಿಸಿಕೊಳ್ಳುತ್ತಿದೆ. ಅಂಧಕಾರವು ನಿಧಾನವಾಗಿ ಹಬ್ಬುತ್ತ ಬರುತ್ತಿದೆ. ವಿಷಯಸುಖಭೋಗದಲ್ಲಿ ಆಸಕ್ತನಾಗಿ ವಿದ್ಯಾಧ್ಯಯನ ಪರಾಙ್ಮುಖನಾದ ವಿದ್ಯಾರ್ಥಿಯ ವಿದ್ಯೆಯಂತೆ ಕಮಲಗಳು ತಮ್ಮ ಕಾಂತಿಯನ್ನು ಕಳೆದುಕೊಳ್ಳುತ್ತಿವೆ. ಕುದೇಶದಲ್ಲಿ ಬಾಳುವ ಗುಣವಂತನೋಪಾದಿಯಂತೆ ದುಂಬಿಗಳು ಕಮಲಗಳು ಮುಖ ಮುಚ್ಚಿಕೊಂಡಿರುವುದರಿಂದ ಮಕರಂದ ಪಾನಕ್ಕೆ ಅವಕಾಶವಿಲ್ಲದೆ ಬಳಲುತ್ತಿವೆ; ದುಷ್ಟ ಸ್ವಭಾವದ ರಾಜನು ಪ್ರಜೆಗಳನ್ನು ಪೀಡಿಸುವಂತೆ ಕತ್ತಲು ಜಗತ್ತನ್ನು ಕಾಡಲಾರಂಭಿಸಿದೆ ಕೃಪಣನು ತನ್ನ ಹಣವನ್ನು ಉಪಭೋಗಿಸದೆ ಕೇವಲ ನೋಡುತ್ತ ನೋಡುತ್ತ ದೃಷ್ಟಿಮಾಂದ್ಯವನ್ನು ಹೊಂದುವಂತೆ, ಜಗತ್ತಿನ ಜನರ ಕಣ್ಣುಗಳು ಕತ್ತಲಲ್ಲಿ ಕಾಣದಾಗುತ್ತಿವೆ."

5) ನೇಕಾರನು, ಭೋಜಮಹಾರಾಜನಿಗೆ ತನ್ನ ಪಾಂಡಿತ್ಯ ಹಾಗೂ ಕಾರ್ಯಚಾತುರ್ಯದ ಬಗೆಗೆ ಹೀಗೆ ಹೇಳಿಕೊಂಡಿದ್ದಾನೆ : " ಮಹಾರಾಜನೆ, ನಾನು ಕಾಳಿದಾಸಕಾವ್ಯಪ್ರತಿಭೆಯಂಥ ಕಾವ್ಯವನ್ನು ರಚಿಸಲಾರೆ; ಆದರೆ ಪ್ರಯತ್ನಿಸಿದಲ್ಲಿ ರಚಿಸಲೂ ಸಮರ್ಥನಾಗಿರುವೆನು. ಎಲೈ ಸಾಹಸಿಗ ಪ್ರಭುವೆ, ನೀನು ರಾಜಾಧಿರಾಜರ–ರಾಜಮಹಾರಾಜರ ಕಿರೀಟಗಳ ಮಣಿಮಾಣಿಕ್ಯಗಳಿಂದಲಂಕೃತ ಶಿರೋಭಾಗಗಳಿಂದ ನಮಸ್ಕರಿಸಲ್ಪಟ್ಟ ಸಿಂಹಾಸ

ನವುಳ್ಳವನಾಗಿರುವೆ. ಕವಿತೆ ಮಾಡಬಲ್ಲೆನು; ಸುಂದರವಾಗಿ ನೇಯ್ಗೆ ಮಾಡಬಲ್ಲೆ ; ಕೀರ್ತಿಶಾಲಿಯೂ ಆಗಬಲ್ಲೆ."

6) ನೇಕಾರನು, ಭೋಜಮಹಾರಾಜನನ್ನು ಕುರಿತು ಇಂತು ನುಡಿದನು : "ಸ್ವಾಮಿಯೇ, ಕಾವ್ಯಪ್ರತಿಭೆ–ರಾಜಧರ್ಮಗಳು ಬೇರೆ ಬೇರೆ. ರಾಜಧರ್ಮದ ದರ್ಪದಲ್ಲಿ ನಿಮಗ್ನನಾದವನಿಗೆ ಕಾವ್ಯಮರ್ಮವು ಅರ್ಥವಾಗುವುದು ಸುಲಭ ಸಾಧ್ಯವಲ್ಲ. ಗುರುಕೃಪೆಯೆಂಬ ಅಮೃತ ಪರಿಪಾಕದಿಂದುಂಟಾದ ಸರಸ್ವತೀ ವೈಭವವು ಸಾಮಾನ್ಯನಿಗೆ ಹೊಂದಲು ಸಾಧ್ಯವಾಗುವುದಿಲ್ಲ. ಅದು ಅಭ್ಯಾಸಬಲದಿಂದ ಮಾತ್ರ ಸಾಧ್ಯ. ಕೆಸರು ತುಂಬಿದ ಕಮಲದ ಕೊಳದಲ್ಲಿ ದಿನವಿಡೀ ಪವಡಿಸಿದ ಕಾಡುಕೋಣ ಕಮಲ ಸೌರಭವನ್ನು ತಿಳಿಯದಿರುವಂತೆ ನೀನು, ಸದಾ ಕವಿಗಳ ಮಧ್ಯೆ ಇದ್ದು ಕಾವ್ಯ ವೈಭವವನ್ನು ಅರಿತಂತೆ ತೋರುತ್ತಿಲ್ಲವು. ಅದಕ್ಕಾಗಿ ನೀನು ನನ್ನನ್ನು ಆಕ್ಷೇಪಿಸಿದ್ದೀಯೆ."

5. ಸಂದರ್ಭ ವಾಕ್ಯಗಳು :

(ಸೂ : ಮೊದಲು ಬರೆಯಿರಿ : ಈ ವಾಕ್ಯವನ್ನು, ಬಲ್ಲಾಳಸೇನ ವಿರಚಿತ 'ಭೋಜಪ್ರಬಂಧ'ದ 'ಸ ತಿಷ್ಠತು ಪುರೇ ಮಮ' ಭಾಗದಿಂದ ಆರಿಸಲಾಗಿದೆ.)

1) **'स तिष्ठतु पुरे मम'**

ಭೋಜರಾಜನ ಮನೋವಾಂಛೆ (ಅಪೇಕ್ಷೆ) ಇದಾಗಿತ್ತು, ಇವನ ಇಚ್ಛೆಯನ್ನು ಪಾಠದಲ್ಲಿ ಮೂರು ಉದಾಹರಣೆಗಳ (ನೇಕಾರ, ಕುಂಬಾರ-ಪತ್ನಿ, ಕುಂಬಾರ) ಮೂಲಕ ಸಮರ್ಥಿಸಲಾಗಿದೆ. ಇವರೆಲ್ಲ ಕಾವ್ಯ–ಭಾಷಾ ಮರ್ಮಜ್ಞರಾಗಿದ್ದರು.

2) **'धनमिव कृपणस्य व्यर्थतामेति चक्षुः ।'**

ಕಾಳಿದಾಸನು, ಭೋಜನ ಅಪ್ಪಣೆಯಂತೆ ಸಂಧ್ಯೆಯನ್ನು ವರ್ಣಿಸುತ್ತ ಹೇಳಿದ್ದಾನೆ. ಲೋಭಿಯು ತನ್ನಲ್ಲಿದ್ದ ಹಣವನ್ನು ಉಪಯೋಗಿಸಿಕೊಳ್ಳದೆ

ನೋಡಿ ನೋಡಿ ಕಣ್ಣನ್ನು ಕೆಡಿಸಿಕೊಳ್ಳುವಂತೆ ಸಂಜೆಯಿಂದ ಕಣ್ಣು ಮುಚ್ಚುಗುತ್ತಿದೆ.

3) 'क्षमी दाता गुणग्राही स्वामी पुण्येन लभ्यते'

ಲಕ್ಷ್ಮೀಧರಕವಿಯು, ಭೋಜನನ್ನು ಇಂತು ಹೊಗಳಿದ್ದಾನೆ : 'ಕ್ಷಮಾ ಶೀಲನೂ, ದ್ದಾನಿಯೂ, ಗುಣಗ್ರಾಹಿಯೂ ಆದ ಆಶ್ರಯದಾತನು,ಆಶ್ರಯ ಬೇಡಿ ಬಂದವನಿಗೆ ಪುಣ್ಯವಶಾತ್ ದೊರೆಯುತ್ತಾನೆ.' ನಿನ್ನನ್ನು ಆಶ್ರಯಿಸಿ ಬಂದು ಸುಖವನ್ನೇ ಪಡೆದಂತಾಯಿತು.'

4) 'हे साहसाङ्क कवयामि वयामि यामि'

ನೇಕಾರನು, ಭೋಜನಿಗೆ ಹೇಳಿದ ಮಾತಿದು : 'ಸಮರ್ಥನಾದ ಸ್ವಾಮಿಯೇ, ನಿನ್ನ ಮಂತ್ರಿ, ನನ್ನನ್ನು ಮೂರ್ಖನೆಂದು ಭಾವಿಸಿದ್ದಾನೆ. ನಾನು ಕಾವ್ಯಸಂಪತ್ತನ್ನು ಉಳ್ಳವನೇ ಆಗಿದ್ದೇನೆ. ಉತ್ತಮ ಕಾವ್ಯರಚಿಸ ಬಲ್ಲೆ; ಉತ್ತಮವಾಗಿ ನೇಯಬಲ್ಲೆ; ಉತ್ತಮರಿಂದ ಕೀರ್ತಿಯನ್ನು ಪಡೆಯಬಲ್ಲೆ.'

5) 'राजदर्पः पृथग्विद्वद्दर्पात् ।'

ನೇಕಾರನು, ಭೋಜನ ಆಕ್ಷೇಪಕ್ಕೆ ಉತ್ತರವೀಯುತ್ತ ಹೇಳಿದ ಮಾತಿದು : "ಸ್ವಾಮಿಯೆ, ಕಾವ್ಯಜಗತ್ತಿನಲ್ಲಿ ಮಹಾರಾಜನನ್ನು ಸಂಬೋಧಿಸುವ ಗೌರವಶಬ್ದಕ್ಕಿಂತ ಅರ್ಥ ಗಾಂಭೀರ್ಯವೇ ಮುಖ್ಯ. ನಾನು ನಿನ್ನನ್ನು ಅವಹೇಳನ ಮಾಡಿಲ್ಲ. ನೀನು ರಾಜದರ್ಪದಿಂದ ನನ್ನನ್ನು ಅನುಶಾಸಿಸಲು ಪ್ರಯತ್ನಿಸುತ್ತಿದ್ದೀಯೆ. ಇದು ಯೋಗ್ಯವಲ್ಲ."

6) 'कासारेद्दिवसं ...... सैरिभः ।'

ನೇಕಾರನು, ಭೋಜನಿಗೆ ಹೇಳಿದ ಮಾತು : "ಕಾಡುಕೋಣವು, ದಿನವೆಲ್ಲ ಕಮಲದ ಸರೋವರದ ಕೆಸರಿನಲ್ಲಿದ್ದರೂ ಅದಕ್ಕೆ ಕಮಲದ ಸುಗಂಧದ ಬೆಲೆ ತಿಳಿಯುವುದಿಲ್ಲ. ನೀನು, ಕವಿಸಮೂಹದಲ್ಲಿದ್ದರೂ, ನಿನಗೆ, ನಿನ್ನ ಆಸ್ಥಾನದ ಇತರ ಕವಿಗಳಿಗೆ ಕಾಳಿದಾಸನ ಯೋಗ್ಯತೆಯು

ತಿಳಿದಿಲ್ಲವು. ನನ್ನ ಯೋಗ್ಯತೆಯೂ ತಿಳಿಯುದಾಗಿದೆ."

7) 'राजचन्द्रं ...... .. पागमन्'।

ಕುಂಭಕಾರನು, ಭೋಜರಾಜನಿಗೆ ಹೇಳಿದ ಮಾತಿದು : "ಸ್ವಾಮಿ, ನೀನು ಚಂದ್ರಸಮಾನನು, ಆಕಾಶವೆಂಬ ಸಾಮ್ರಾಜ್ಯವನ್ನು ತೊರೆದು ಭೂಮಿಯು ಮೇಲೆ ವಿರಾಜಿಸುತ್ತಿರುವೆ. ನಿನ್ನ ವಿಯೋಗದುಃಖವನ್ನು ಸಹಿಸಲಸಾಧ್ಯವಾಗಿ,ನಕ್ಷತ್ರಗಳು ಈ ಕುಂಭದಲ್ಲಿರುವ ರತ್ನ-ವಜ್ರ-ಮುತ್ತು ಮಾಣಿಕ ರೂಪ ಧರಿಸಿ ವಿರಾಜಿಸುತ್ತ ನಿನ್ನ ಸಾನ್ನಿಧ್ಯವನ್ನು ಸೇರಿವೆ."

6. ವ್ಯಾಕರಣಾಂಶಗಳು :

1) ಕ್ರಿಯಾರೂಪಗಳು : 1) प्राह- ಪ್ರ+ಬ್ರೂ ಧಾತು; ಲಟ್ ಲಕಾರ, ಪ್ರಥಮ ಪುರುಷ ಏಕವಚನ. 2) अभूत्- ಭೂ ಧಾತು, ಲುಙ್ ಲಕಾರ, ಪ್ರಥಮ ಪುರುಷ, ಏಕವಚನ. 3) व्यजिज्ञपत्- ವಿ+ಜ್ಞಪ್ ಧಾತು, ಲುಙ್ ಲಕಾರ, ಪ್ರಥಮ ಪುರುಷ ಏಕವಚನ. 4) प्रवेशय- ಪ್ರ+ವಿಶ್ ಧಾತು, ಣಿಜಂತ ಪ್ರೇರಣಾರ್ಥಕ, ಲೋಟ್ ಲಕಾರ, ಮಧ್ಯಮ ಪುರುಷ, ಏಕವಚನ 5) आस्त- ಆಸ್ ಧಾತು, ಲುಙ್ ಲಕಾರ, ಪ್ರಥಮ ಪುರುಷ, ಏಕವಚನ. 6) अवादीत्- ವದ್ ಧಾತು, ಲಙ್ ಲಕಾರ, ಪ್ರಥಮ ಪುರುಷ, ಏಕವಚನ. 7) दीयताम्- ದಾ ಧಾತು, ಕರ್ಮಣಿ, ಲೋಟ್ ಲಕಾರ, ಪ್ರಥಮ ಪುರುಷ, ಏಕವಚನ. 8) निःसर – ನಿಸ್ + ಸೃ ಧಾತು, ಲೋಟ್ ಲಕಾರ, ಮಧ್ಯಮ ಪುರುಷ. ಏಕವಚನ. 9) पश्य- ದೃಶ್ ಧಾತು, ಲೋಟ್ ಲಕಾರ, ಮಧ್ಯಮ ಪುರುಷ, ಏಕವಚನ. 10) वयामि- ವೇ ಧಾತು, ಲಟ್ ಲಕಾರ, ಉತ್ತಮ ಪುರುಷ, ಏಕವಚನ. 11) भैषीः- ಭೀ ಧಾತು, ಲುಙ್ ಲಕಾರ, ಮಧ್ಯಮ ಪುರುಷ, ಏಕವಚನ. 12) अभिधास्यामि –– ಅಭಿ+ಧಾ ಧಾತು, ಲೃಟ್ ಲಕಾರ, ಉತ್ತಮ ಪುರುಷ, ಏಕವಚನ 13) वक्ति– ವಚ್ ಧಾತು, ಲಟ್ ಲಕಾರ, ಪ್ರಥಮಪುರುಷ, ಏಕವಚನ

NARAYANAN



14) अभ्यगा-- ಅಭಿ+ಇ ಧಾತು, ಲುಙ್ ಲಕಾರ, ಉತ್ತಮ ಪುರುಷ, ಏಕವಚನ. 15) आसाद्य- ಆ+ಸದ್+ಲ್ಯಪ್ ಪ್ರತ್ಯಯ.

2) ಸಮಾಸಗಳು :

1. वन्दितविद्वद्वृन्दे— वन्दितम् विद्वद्वृन्दं येन सः तस्मिन् (ಬಹುವ್ರೀಹಿ)

2. प्रियप्रजाबान्धवे — प्रजाश्च एताः बान्धवाश्च प्रजाबान्धवाः, प्रियाः प्रजाबान्धवाः यस्य सः, तस्मिन्
(ಕರ್ಮಧಾರಯ, ಬಹುವ್ರೀಹಿ)

3. भूपालमौलिमणिमण्डितपादपीठः — भूपालानां मौलयः, तेषां मणयः, तैः मण्डितं, पादयोः पीठं यस्य सः (सम्बोधने) (ಷಷ್ಠೀತತ್ಪುರುಷ, ಬಹುವ್ರೀಹಿ)

4. गुरुकृपापीयूषपाकोद्भवम् — गुरोः कृपा गुरुकृपा, गुरुकृपा एव पीयूषं, तस्य पाकः, तस्मात् उद्भवः, यस्य तत् ( ಷಷ್ಠೀತತ್ಪುರುಷ, ಬಹುವ್ರೀಹಿ)

5. पाठप्रतिष्ठाजुषाम् — पाठमात्रेण प्रतिष्ठां जुषन्ति इति पाठप्रतिष्ठाजुषः, तेषां
(ಮಧ್ಯಮ ಪದ ಲೋಪೀ ತೃತೀಯಾ ತತ್ಪುರುಷ)

6. राजचन्द्रम् — राजा एव चन्द्रः, तम्
(ಕರ್ಮಧಾರಯ)

7. रत्नश्रेणिमिषात्—रत्नानां श्रेणिः तस्याः मिषात्
(ಷಷ್ಠೀ ತತ್ಪುರುಷ)

3) ವ್ಯಾಕರಣ ವಿಶೇಷ : मा भैषीः — ಭೀ ಧಾತು, ಲುಙ್ ಲಕಾರ, ಮಧ್ಯಮ ಪುರುಷ, ಏಕವಚನ. ಇಲ್ಲಿ 'ಮಾ' ಯೋಗದಿಂದ

11

ಲುಙ್ ಲಕಾರದಲ್ಲಿ 'ಅ' (अट्) ಆಗಮ ಇಲ್ಲವು.

7. ಕಠಿಣ ಪದಗಳ ಅರ್ಥ : कृशानु – ಬೆಂಕಿ (ಅಗ್ನಿ) हरेः – ಇಂದ್ರನ आसाद्य – ಹೊಂದಿ पविः – ವಜ್ರಾಯುಧ सौरभः – ಸುವಾಸನೆ वल्लभ – ಗಂಡ मा भैषीः – ಹೆದರಬೇಡ भृङ्ग – ದುಂಬಿ कुम्भकार – ಕುಂಬಾರ स्वामी – ಯಜಮಾನ

## ಪಾಠ 6 शुकनासः चन्द्रापीडं उपदिशति

[ ಶುಕನಾಸನು ಚಂದ್ರಾಪೀಡನಿಗೆ ಉಪದೇಶಿಸುತ್ತಾನೆ ]

1. ಅವತರಣಿಕೆ :

ಬಾಣಭಟ್ಟ ವಿರಚಿತ 'ಕಾದಂಬರಿ'ಯ 'ಶುಕನಾಸೋಪದೇಶ'ದಲ್ಲಿ ರಾಜಕುಮಾರನಾದವನು, ಭಾವೀರಾಜನಾಗಲು ತಿಳಿಯಬೇಕಾದ ಅಂಶವನ್ನು ಬೋಧಿಸಲಾಗಿದೆ. ಯೌವನ, ಧನಸಂಪತ್ತು, ಪ್ರಭುತ್ವ, ಅವಿವೇಕ– ಈ ಎಲ್ಲವುಗಳ ಜೊತೆಗೆ ಲಕ್ಷ್ಮೀಪದದ ಬಗೆಗೆ ವಿವರಿಸಲಾಗಿದೆ. ಈ ಭಾಗದಲ್ಲಿ ಲೋಕ ನೀತಿಯು ಅಭಿವ್ಯಕ್ತವಾಗಿದೆ.

2. ಕವಿಕಾವ್ಯದ ಬಗೆಗೆ:

ಮಹಾಕವಿ ಬಾಣಭಟ್ಟನ ದೇಶಕಾಲ ಪರಿಚಯ :

'गद्यं कवीनां निकषं वदन्ति'

ದಂಡಿ, ಬಾಣ ಮತ್ತು ಸುಬಂಧು –– ಈ ಮೂವರು ಸಂಸ್ಕೃತ 'ಗದ್ಯರತ್ನತ್ರಯ'ರೆನಿಸಿದ್ದಾರೆ. ದಂಡಿ ಕೃತ ದಶಕುಮಾರಚರಿತೆ, ಬಾಣ ವಿರಚಿತ ಕಾದಂಬರಿ ಪ್ರಖ್ಯಾತ ಸಂಸ್ಕೃತ ಗದ್ಯ ಕಾವ್ಯಗಳು.

ಪೂರ್ವಜರು :

'ಹರ್ಷಚರಿತೆ' ಹಾಗೂ 'ಕಾದಂಬರಿ'ಯಿಂದ ಬಾಣನ ವಂಶ ಪರಿಚಯ ಉಂಟಾಗುತ್ತದೆ. ಇದರ ಪ್ರಕಾರ ಬಾಣನು ವಾತ್ಸ್ಯಾಯನ ಗೋತ್ರದವನು. ಪೂರ್ವಜರು ಗುಪ್ತರಾಜರಿಂದ ಸನ್ಮಾನಿತರಾಗಿದ್ದರು.

ಈ ವಂಶದ ಕುಬೇರ ಎಂಬುವನ ಮೊಮ್ಮಗ ಚಿತ್ರಭಾನುವೇ ಬಾಣನ ತಂದೆ ರಾಜದೇವಿ ಈತನ ತಾಯಿ. ಶೋಣಾನದಿಯ ತೀರದಲ್ಲಿದ್ದ 'ಪ್ರೀತಿಕೂಟ' ಈತನ ಆವಾಸ ಸ್ಥಾನವಾಗಿತ್ತೆಂದು ಹೇಳಲಾಗಿದೆ. ಬಾಣನಿಗೆ ಹರ್ಷ ವರ್ಧನನ ಆಶ್ರಯ ದೊರೆತಿತ್ತು.

ಕಾಲ : ಹರ್ಷವರ್ಧನನ ಕಾಲ ಕ್ರಿ. ಶ. 606 ರಿಂದ 647. ಈ ಆಧಾರದ ಮೇಲೆ ಬಾಣ ಭಟ್ಟನ ಕಾಲ 7 ನೆಯ ಶತಮಾನವೆಂದು ಹೇಳಲಾಗಿದೆ.

ಕೃತಿಗಳು : ಬಾಣಭಟ್ಟನು ಈ ಮುಂದಿನ 5 ಕೃತಿಗಳನ್ನು ಬರೆದ ನೆಂದು ಹೇಳಲಾಗಿದೆ :

1) ಹರ್ಷಚರಿತ (ಹರ್ಷನ ಜೀವನ ಚಿತ್ರ)
2) ಕಾದಂಬರಿ : (ಚಂದ್ರಾಪೀಡ – ಕಾದಂಬರಿ ಮತ್ತು ಮಹಾ ಶ್ವೇತೆ–ಪುಂಡರೀಕರ ಪ್ರಣಯ ಕಥೆ)
3) ಚಂಡೀಶತಕ (ಚಂಡಿಯ ವೃತ್ತಾಂತ)
4) ಪಾರ್ವತೀ ಪರಿಣಯ (ಶಿವ – ಪಾರ್ವತಿಯರ ವಿವಾಹದ ಕಥೆಯುಳ್ಳ ನಾಟಕ)
5) ಮುಕುಟತಾಡಿತಕ (ಭೀಮ – ದುರ್ಯೋಧನರ ಯುದ್ಧ – ವೃತ್ತಾಂತವುಳ್ಳ ಅಪ್ರಕಾಶಿತ ನಾಟಕ)

ಭಾಷಾಶೈಲಿ : ಬಾಣನು ಪಾಂಚಾಲೀ ರೀತಿಯಲ್ಲಿ ಗದ್ಯಕಾವ್ಯ ರಚಿಸಿದ ಅಮರಕವಿ. ಇವನ ಶೈಲಿ ಸಮಾಸಪೂರ್ಣವಾದುದು. ದೀರ್ಘ ಸಮಾಸಯುಕ್ತ ಸುದೀರ್ಘ ವಾಕ್ಯಗಳಿವೆ. ಒಂದೊಂದು ವಾಕ್ಯವೂ ಉಪಮೆ, ರೂಪಕ, ಉತ್ಪ್ರೇಕ್ಷೆ, ಶ್ಲೇಷಾಲಂಕಾರಗಳಿಂದ ಕೂಡಿದೆ.

ಸಮಾಪ್ತಿ : ಬಾಣ ಸಂಸ್ಕೃತ ಸರಸ್ವತಿಯ ಭಂಡಾರವನ್ನು ಸೂರೆ ಗೊಂಡಿದ್ದಾನೆ. ಚಂದ್ರಸೇನನು 'बाणस्तु पञ्चाननः' ಎಂದಿದ್ದಾನೆ. ಗೋವರ್ಧನ ಪಂಡಿತನು —

'प्रागल्भ्यमधिकं आप्तुं वाणी बाणो बभूव ह'

(ಹೆಚ್ಚು ಪ್ರೌಢಿಮೆಯನ್ನು ಪಡೆಯಲು ಶಾರದೆಯೇ ಬಾಣನ ರೂಪವನ್ನು ಪಡೆದಳು) ಎಂದಿದ್ದಾನೆ. ಮತ್ತೊಬ್ಬ ಮಹಾನುಭಾವನು 'बाणोच्छिष्टं जगत्सर्वं', ಎಂದು ಪ್ರಶಂಸಿಸಿದ್ದಾನೆ.

3. ಪಾಠಸಂಕ್ಷೇಪ :

ಕೆಲವು ದಿವಸಗಳ ತರುವಾಯ ಅರಸನು ಚಂದ್ರಾಪೀಡನಿಗೆ ಯುವರಾಜ ಪಟ್ಟಗಟ್ಟಬೇಕೆಂದು ಮನದೊಳಗೆ ಆಲೋಚಿಸಿ, ಶುಕನಾಸ ಮುಂತಾದ ಮಂತ್ರಿಗಳಿಗೆ ತಿಳಿಸಿ, ಪಟ್ಟಾಭಿಷೇಕದ ಸಾಮಗ್ರಿಯನ್ನು ಸಿದ್ಧ ಮಾಡಲಪ್ಪಣೆಕೊಟ್ಟನು. ಯುವರಾಜ್ಯಾಭಿಷೇಕವಾಗುವುಕ್ಕೆ ಮೊದಲು ಒಂದೆರಡು ದಿನವಿರುವಾಗ ಚಂದ್ರಾಪೀಡನು ಶುಕನಾಸನ ದರ್ಶನಕ್ಕೆ ಹೋದನು. ಆಗ ಶುಕನಾಸನು – "ಯುವರಾಜರೇ, ನೀವು ಸಕಲಶಾಸ್ತ್ರ ಗಳನ್ನು ಓದಿದವರು. ಸರ್ವ ವಿಷಯಗಳನ್ನು ಬಲ್ಲವರು. ಇನ್ನು ಹೆಚ್ಚಿಗೆ ನಿಮಗೆ ಉಪದೇಶ ಮಾಡಬೇಕೆಂಬ ಹಾಗೇನೂ ಇಲ್ಲ; ಆದರೂ ಎರಡು ಮಾತುಗಳನ್ನು ಹೇಳುತ್ತೇನೆ, ಚಿತ್ತಗೊಟ್ಟು ಆಲಿಸಬೇಕು.

ತಾರುಣ್ಯದ ಯೋಗದಿಂದ ಪ್ರಾಪ್ತವಾಗುವ ತಮವು (ಅಜ್ಞಾನವು) ಉಳಿದ ಅಂಧಕಾರದಂತೆ ಸೂರ್ಯನ ಕಿರಣಗಳಿಂದೇನೂ ನಷ್ಟವಾಗುವುದಿಲ್ಲ ಅಂಥ ಗಹನವಾದದ್ದು. ಐಶ್ವರ್ಯದಿಂದ ಪ್ರಾಪ್ತವಾದ ಮದವು ಐಶ್ವರ್ಯ ಹೋದರೂ ಹೋಗುವುದಿಲ್ಲ ಅಷ್ಟು ಕಷ್ಟಕರವಾದದ್ದು. ಗರ್ವದಿಂದ ಹುಟ್ಟಿದ ತಾಪವು ಶೀತೋಪಚಾರಗಳಿಂದೇನೂ ಶಾಂತವಾಗುವುದಿಲ್ಲ ಅಂಥ ಉಗ್ರವಾದದ್ದು. ವಿಷಯವೆಂಬ ನಂಜಿನಿಂದ ಸಾಯುವುದು ನಿಶ್ಚಯವೆಂದು ತಿಳಿದರೂ ಮನುಷ್ಯರು ಅದರ ಸವಿ ತೆಗೆದುಕೊಳ್ಳದೆ ಬಿಡುವುದಿಲ್ಲ ಅದು ಅಂಥ ಮೋಹಕವಾದದ್ದು ಕಾಮಲಂಪಟವೆಂಬ ಮಲಕ್ಕೆ ಒಳಗಾಗದವರು ಈ ಭೂಮಿಯ ಮೇಲೆ ಬಹಳ ವಿರಳ; ದಿನಾಲು ಮಾಡುವ ಸ್ನಾನದಿಂದ ಈ ಮಲವು ಹೋಗುವುದಿಲ್ಲ. ರಾಜ್ಯಸುಖವೆಂಬ ನಿದ್ದೆ ಹತ್ತಿದ ಬಳಿಕ ಬೆಳಗಾದರೂ ಎಚ್ಚರವಾಗುವುದಿಲ್ಲ. ಒಳ್ಳೆಯ ಪ್ರಬುದ್ಧರಾದ ಅರಸರು ಸಹ ಇನ್ನೂ ಈ ನಿದ್ದೆಯೊಳಗೇ ಆಕಳಿಸುತ್ತಾರೆ.

3) अक्षरम् — यत् न क्षरति तत्
(ನಞ್ ತತ್ಪುರುಷ)

4) अचक्षुष्कम् — न चक्षुः अस्य करणं भवति
(ನಞ್ ತತ್ಪುರುಷ)

5) अमात्रम् — मीयते येन तत् मात्रम् । तेन न
न किञ्चित् मीयते इति तत् (ಬಹುವ್ರೀಹಿ ನಞ್ ತತ್ಪುರುಷ)

6) अनन्तरम् — अन्तरं यत् तत् (ಏಕಪದ)

7) सूर्यचन्द्रमसौ — सूर्यः च चन्द्रमा च (द्वन्द्व स.)

8) द्यावापृथिवी — द्यौः च पृथिवी च (द्वन्द्व स.)

9) उग्रपुत्रः — उग्रवंशस्य पुत्रः
(ಷಷ್ಠೀತತ್ಪುರುಷ ಸಮಾಸ)

ಗ) ಏಕಪದಗಳು :

1. वाचक्नवी (वचक्नोः अपत्यं स्त्री– गार्गी) ।

2. काश्यः — (काश्यां भवः) ।

3. वैदेहः — (विदेहानां राजा)

ಘ) ಅವ್ಯಯ : हन्त ।

ಙ) ಶಬ್ದರೂಪ ಗುರುತಿಸುವುದು :

विधृते – ಸ್ತ್ರೀಲಿಂಗ ರೂಪ, ಪ್ರಥಮಾವಿಭಕ್ತಿ, ದ್ವಿವಚನ.

6. ಕಠಿಣಪದಗಳ ಅರ್ಥ : बाणवन्तौ – ಇಬ್ಬರು ಶೂರರು, उपोदस्थाम् – ಎದ್ದುಂಥವಳು, अक्षरम् – ನಾಶವಲ್ಲದ್ದು, उच्छायम् – ಛಾಯೆಯಿಲ್ಲದ್ದು, अतमः – ಕತ್ತಲು ಇಲ್ಲದ್ದು, प्रतीच्यः – ಪಶ್ಚಿಮ ದಿಕ್ಕು, अन्वायत्ताः – ಅನುಸರಿಸಿದವರು.

## ಪಾಠ : 3 धिगर्थाः कष्टसंश्रयाः

## [ ಕಷ್ಟಕ್ಕೆ ಆಶ್ರಯವಾದ ಹಣಕ್ಕೆ ಧಿಕ್ಕಾರವು ]

1 ಅವತರಣಿಕೆ : ಜೀವನಯಾಪನೆಗೆ ಹಣಸಂಪಾದನೆ ಅನಿವಾರ್ಯ. ಹಣಸಂಪಾದನೆ ಸುಲಭಸಾಧ್ಯವಲ್ಲ. ಸಂಪಾದಿಸಿದ ಸಂಪತ್ತನ್ನು ಸಂರಕ್ಷಿಸಿ ಕೊಳ್ಳುವುದು ಅತಿಕಷ್ಟಸಾಧ್ಯ. ಸಂಪಾದಿಸಿದ ಸಂಪತ್ತಿನ ರಕ್ಷಣೆಗೆ ಅಪರಿಚಿತರನ್ನು ನಂಬಬಾರದು. ದೇವಶರ್ಮನು, ಆಷಾಢಭೂತಿಯನ್ನು ನಂಬಿ ಮೋಸಹೋದನು.

2. ಪಂಚತಂತ್ರ :

ಭಾರತೀಯ ಸಾಹಿತ್ಯ ಭಂಡಾರದಲ್ಲಿ (ಸಂಸ್ಕೃತ) ಪಂಚತಂತ್ರವು ಅತ್ಯಂತ ಮುಖ್ಯ ಸ್ವಾರಸ್ಯಪೂರ್ಣ ಉಪದೇಶಾತ್ಮಕ ಕಲ್ಪಿತ ಕಥೆ. ಇದರಲ್ಲಿ ಅರ್ಥಶಾಸ್ತ್ರದ ಐದು ತಂತ್ರಗಳನ್ನು ನಿರೂಪಿಸಿರುವುದರಿಂದ ಇದಕ್ಕೆ 'ಪಂಚತಂತ್ರ' ಎಂಬ ಹೆಸರಾಯಿತು. ಇದು ಗದ್ಯಾತ್ಮಕವಾಗಿಯೇ ರಚಿತವಾಗಿದ್ದರೂ ಮಧ್ಯೆ ಮಧ್ಯೆ ಬೋಧಪ್ರದವಾದ ಶ್ಲೋಕಗಳು ಸೇರಿಕೊಂಡಿವೆ.

ಪಂಚತಂತ್ರದ ಕರ್ತೃ : ಮಹಿಳಾರೋಪ್ಯದ ರಾಜನಾದ ಅಮರಶಕ್ತಿಯ ಮೂವರು ಮೂರ್ಖ ಕುಮಾರರನ್ನು ರಾಜನೀತಿ ನಿಪುಣರನ್ನಾಗಿ ಮಾಡಲು ವಿಷ್ಣುಶರ್ಮನೆಂಬ ವಿದ್ವಾಂಸನು ಪಂಚತಂತ್ರವನ್ನು ರಚಿಸಿದುದಾಗಿ ಅದರ ಕಥಾಮುಖದಿಂದ ತಿಳಿದುಬರುತ್ತದೆ.

ಪಂಚತಂತ್ರದ ಕಾಲ : ಈಗ ಉಪಲಬ್ಧವಾಗಿರುವ ಪಂಚತಂತ್ರದ ಪ್ರಾಚೀನ ರೂಪವೆಂದರೆ – 'ಬುಡ್' ಎಂಬ ವಿದ್ವಾಂಸನಿಂದ ಕ್ರಿ ಶ 570 ರಲ್ಲಿ ರಚಿತವಾದ 'ಸಿರಿಯನ್' ಅನುವಾದ ಮತ್ತು ಕ್ರಿ. ಶ. 750 ರಲ್ಲಿ ಅಬ್ದುಲ್ಲಾ ಇಬ್ನಲ್ ಮೊಗಫ್ಫಾ ಬರೆದ ಅರಬ್ಬೀ ಭಾಷಾಂತರ. ಕ್ರಿ. ಶ. 3 ನೆಯ ಶತಮಾನದಲ್ಲಿ ಇದು ರಚಿತವಾಗಿರಬೇಕೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

ಪಂಚತಂತ್ರದ ತಂತ್ರಗಳು : ಮೊದಲನೆಯ ಭಾಗವಾದ 'ಮಿತ್ರ ಭೇದ'ವು ಕರಟಕ, ದಮನಕ ಎಂಬ ಎರಡು ನರಿಗಳು ಗಾಢ ಮಿತ್ರರಾಗಿದ್ದ ಸಿಂಹ ಮತ್ತು ವೃಷಭಗಳಿಗೆ ವೈಮನಸ್ಯ ತಂದುಹಾಕಿ ತಾವು ಸುಖಿವಾಗಿದ್ದ ಕಥೆಯ ಮೂಲಕ 'ಭೇದ' ತಂತ್ರವನ್ನು ನಿರೂಪಿಸುತ್ತದೆ. ಎರಡನೆಯ 'ಮಿತ್ರಲಾಭ'ವು ಕಾಗೆ, ಇಲಿ, ಆಮೆ ಮತ್ತು ಜಿಂಕೆ-- ಇವುಗಳ ಕಥೆಯನ್ನು ಹೇಳಿ ಒಳ್ಳೆಯ ಸ್ನೇಹದ ಫಲವನ್ನು ವಿವರಿಸುತ್ತದೆ. ಮೂರನೆಯ 'ಕಾಕೋಲೂಕೀಯ'ವು ಕಾಗೆ ಮತ್ತು ಗೂಬೆಗಳ ಕಥೆಯ ಮೂಲಕ ಜನ್ಮತಃ ಶತ್ರುಗಳಾದವರ ಸ್ನೇಹ ಬಂಧನದ ಅಪಾಯಗಳನ್ನು ತಿಳಿಸುತ್ತದೆ ನಾಲ್ಕನೆಯ 'ಲಬ್ಧಪ್ರಣಾಶ'ವು ಕಪಿ ಮತ್ತು ಮೊಸಳೆಯ ಕಥೆಯ ಮೂಲಕ ನಮ್ಮ ಲೋಪದೋಷಗಳಿಂದ ನಾವು ನಮ್ಮಲ್ಲಿರುವುದನ್ನು ಹೇಗೆ ಕಳೆದುಕೊಳ್ಳಬೇಕಾಗುತ್ತದೆಂಬುದನ್ನು ನಿರೂಪಿಸಿದೆ. ಐದನೆಯ 'ಅಪರೀಕ್ಷಿತಕಾರಕ'ವು ಪೂರ್ವಾಪರ ವಿಚಾರಗಳನ್ನೆಲ್ಲ ಚೆನ್ನಾಗಿ ಪರಿಶೀಲಿಸದೆ ಯಾವ ಕೆಲಸವನ್ನೇ ಆಗಲಿ ದುಡುಕಿ ಮಾಡಿದರೆ ಉಂಟಾಗುವ ಕಷ್ಟನಷ್ಟಗಳನ್ನು ಪ್ರತಿಪಾದಿಸಿ ತೋರಿಸುತ್ತದೆ.

3. ಪಾಠಸಂಕ್ಷೇಪ : 1) ಜನನಿಬಿಡವಾದ ಪ್ರದೇಶವೊಂದರಲ್ಲಿದ್ದ ಮಠದಲ್ಲಿ ದೇವಶರ್ಮ ಎಂಬ ಸಂನ್ಯಾಸಿಯು ಇದ್ದನು. ಇವನಲ್ಲಿ, ದಾನಿಗಳು ಕೊಡುವ ಹಣವು ಸಂಗ್ರಹವಾಯಿತು. ಈ ರೀತಿ ಕೂಡಿದ ಹಣವನ್ನು ಅಹರ್ನಿಶಿ ಸಂರಕ್ಷಿಸಲಾರಂಭಿಸಿದನು. 'ಹಣ ಸಂಪಾದಿಸುವುದು ಕಷ್ಟ, ಸಂಪಾದಿಸಿದುದನ್ನು ರಕ್ಷಿಸುವುದು ಮತ್ತೂ ಕಷ್ಟ, ಸಂಪಾದನೆಯಲ್ಲೂ ಕಷ್ಟ, ಖರ್ಚಾದರೂ ಕಷ್ಟ. ಕಷ್ಟಾಶ್ರಯ ಹಣಕ್ಕೆ ಧಿಕ್ಕಾರವಿರಲಿ.'

2) ದೇವಶರ್ಮನಲ್ಲಿರುವ ಹಣದ ವಿಷಯವನ್ನರಿತ ಆಷಾಢಭೂತಿಯೆಂಬ ವಂಚಕನು ವಿರಕ್ತನ ವೇಷದಲ್ಲಿ ಜಾಣತನದಿಂದ ಮಾತನಾಡುತ್ತ ಬಂದು, ಈತನ ಶಿಷ್ಯತ್ವವನ್ನು ಹೊಂದಿದನು. ಆದರೆ, ದೇವಶರ್ಮನು ರಾತ್ರಿ ಕಾಲದಲ್ಲಿ ಏಕಾಂತವಾಸಿಯಾಗಿಯೇ ಉಳಿಯುತ್ತಿದ್ದನು. ಶಿಷ್ಯನಾದ ಆಷಾಢಭೂತಿಯನ್ನು ತನ್ನ ಆಶ್ರಯಸ್ಥಾನದಲ್ಲಿ ರಾತ್ರಿಯಿರಲು ಅವಕಾಶ

ಕೊಡಲಿಲ್ಲ. "ರಾಜನು ಕೆಟ್ಟ ಸಲಹೆಗಳಿಗೆ ಕಿವಿಗೊಡುವುದರಿಂದ ಹಾಳಾಗುತ್ತಾನೆ, ಯತಿಯು ಇತರರ ಸಂಸರ್ಗದಲ್ಲಿರಬಾರದು, ಅತಿ ಲಾಲನೆಪಾಲನೆಯಿಂದ ಮಗನು ಕೆಟ್ಟು ಹೋಗುತ್ತಾನೆ, ಅಧ್ಯಯನ ಮಾಡದ ಬ್ರಾಹ್ಮಣ ಕೆಟ್ಟು ಹೋಗುತ್ತಾನೆ, ಕೆಟ್ಟ ಮಗನಿಂದ ವಂಶವು ಹಾಳಾಗುತ್ತದೆ, ದುಷ್ಟರ ಸಹವಾಸದಿಂದ ಶೀಲವು ನಷ್ಟವಾಗುತ್ತದೆ. ಅಲ್ಲದೆ, ಪ್ರೀತಿ ಭಾವನೆಯಿಲ್ಲದ ಎಡೆಯಲ್ಲಿ ಸ್ನೇಹಮಾಡಬಾರದು ವ್ಯವಸ್ಥೆ ಯಿಲ್ಲದ ತಾಣದಲ್ಲಿ ಐಶ್ವರ್ಯವು ಹಾಳಾಗುತ್ತದೆ, ಸ್ನೇಹಪರವಶತೆ ಯಿಂದ ಪ್ರಯಾಣವನ್ನು ಕೈಗೊಳ್ಳಬಾರದು, ಹೆಂಗಸು ಅಸತ್ಕಾರ್ಯದಲ್ಲಿ ತೊಡಗಿದರೆ ಹಾಳಾಗುತ್ತಾಳೆ, ವ್ಯವಸಾಯವನ್ನು ಬಿಡಬಾರದು, ಹಣ ವನ್ನೂ ಪ್ರಮಾದದಿಂದ ಸಿಕ್ಕಿಸಿಕ್ಕಿದ ಕಡೆ ಇಡಬಾರದು."

3) ಒಮ್ಮೆ, ಯಾರಿಂದಲೋ ಆಹ್ವಾನಿತನಾಗಿ, ದೇವಶರ್ಮನು, ಶಿಷ್ಯ ಆಷಾಢಭೂತಿ ಸಹಿತನಾಗಿ, ಜತೆಯಲ್ಲಿ ಸಂಗ್ರಹೀತವಾದ ಹಣದಗಂಟ ನ್ನು ಚಿಂದಿಬಟ್ಟೆಯಲ್ಲಿ ಅಡಗಿಸಿಕೊಂಡು ಹೊರಟನು. ದಾರಿಯಲ್ಲಿ ನದೀ ತೀರದಲ್ಲಿ, 'ದೇಹಬಾಧೆಯನ್ನು ತೀರಿಸಿಕೊಂಡು ಬರುವ ತನಕ ಗುರುವಿನ ಈ ಗಂಟನ್ನು ಸಂರಕ್ಷಿಸೆಂದು' ದೇವಶರ್ಮನು ಆಷಾಢಭೂತಿಯ ಕೈಗೆ ಕೊಟ್ಟು ಹೊರಟು ಹೋದನು. ದೇವಶರ್ಮನು ಕಣ್ಮರೆಯಾಗುತ್ತಲೇ ಆಷಾಢಭೂತಿಯು ಹಣದ ಗಂಟನ್ನು ಅಪಹರಿಸಿಕೊಂಡು ಓಡಿಹೋಗಿದ್ದನು ಹಣದ ಗಂಟನ್ನು ಕಾಣದ ದೇವಶರ್ಮನು ಮೂರ್ಛಿತನಾಗಿ ಭೂಮಿಯ ಮೇಲೆ ಬಿದ್ದುಬಿಟ್ಟನು. ದೇವಶರ್ಮನು ಲೋಕವ್ಯವಹಾರಚತುರನಾದ ರೂ, ಆಷಾಢಭೂತಿಯ ಕಪಟಭಕ್ತಿಯನ್ನು ಅರಿಯಲಾರದೇ ಹೋಗಿದ್ದನು ಲೋಕದಲ್ಲಿ ಆಷಾಢಭೂತಿಯಂಥ ಕಪಟಶಿಷ್ಯರೇ ಅಧಿಕವಾಗಿದ್ದಾರೆ.

4. ಕ) ಪ್ರಶ್ನೋತ್ತರ :

1) ದೇವಶರ್ಮ ಯಾರು ? ಇವನಲ್ಲಿ ಹಣ ಸಂಗ್ರಹವಾದುದು ಹೇಗೆ ? ಹಣದ ಆರ್ಜನೆ ಮತ್ತು ಸಂರಕ್ಷಣೆ ವಿಷಯದಲ್ಲಿ ದೇವಶರ್ಮನ ಅಭಿಪ್ರಾಯವೇನು ?

ಉತ್ತರ : (ಸೂ : ಪಾಠಸಂಕ್ಷೇಪದ 1 ನೇ ಭಾಗವನ್ನು ಬರೆಯಿರಿ.)

2) ಆಷಾಢಭೂತಿ ಯಾರು ? ಅವನು ದೇವಶರ್ಮನಲ್ಲಿಗೆ ಬರಲು ಕಾರಣವೇನು ? ಅವನನ್ನು ರಾತ್ರಿ ವೇಳೆಯಲ್ಲಿ ದೇವಶರ್ಮನು ತನ್ನ ಸ್ಥಾನದಿಂದ ಏಕೆ ದೂರವಿಡುತ್ತಿದ್ದನು ? ಈ ವಿಷಯದಲ್ಲಿ ಅವನ ಅಭಿಪ್ರಾಯವೇನು ?

ಉತ್ತರ : (ಸೂ : ಪಾಠಸಂಕ್ಷೇಪದ 2 ನೇ ಭಾಗವನ್ನು ಬರೆಯಿರಿ.)

3) ಆಷಾಢಭೂತಿಯು ದೇವಶರ್ಮನ ಶಿಷ್ಯತ್ವವನ್ನು ಹೇಗೆ ಸಂಪಾದಿಸಿಕೊಂಡನು ? ದೇವಶರ್ಮನು ಈತನ ತೋರಿಕೆಯ ತನದಿಂದ ಪ್ರಭಾವಿತನಾಗಿ ದೀಕ್ಷೆ ನೀಡುವ ಬಗೆಗೆ ತನ್ನ ಯಾವ ಅಭಿಪ್ರಾಯವನ್ನು ಅಭಿವ್ಯಕ್ತಿಸಿದನು ?

ಉತ್ತರ : ದೇವಶರ್ಮನಲ್ಲಿ ಸಂಪತ್ತು ಸಂಗ್ರಹವಾಗಿದೆ ಎಂಬುದನ್ನು ಆಷಾಢಭೂತಿಯು ಅರಿತನು. ಅದನ್ನು ಅಪಹರಣಮಾಡಲು ನಿಶ್ಚಯಿಸಿ ವಿರಕ್ತ ವೇಷ ಧರಿಸಿ, ದೇವಶರ್ಮನಲ್ಲಿಗೆ ಬಂದು ಅಂದನು, 'ನಾನು ಆಚಾರರಹಿತನು, ಅಧಿಕಾರಲಾಲಸೆಯಿಲ್ಲದವನು, ಆಶಾತೀತನು, ಅಲಂಕಾರಪ್ರಿಯನಲ್ಲವು, ಪ್ರಿಯವಾಗಿ ನುಡಿಯುವವನು, ಸ್ಪಷ್ಟವಾದಿಯು ವಂಚಕನಲ್ಲವು, ಅಲ್ಲದೆ ಮುಂದುವರಿದು, ' ಈ ಜಗತ್ತು ನಿಸ್ಸಾರವಾದುದು ಯೌವನವು ಬೆಟ್ಟದಿಂದ ಹೊರಟ ನದೀ ವೇಗಕ್ಕೆ ಸಮಾನವು, ಆಸೆ ಎಂಬು ಹುಲ್ಲಿಗ್ನಿ ಸಮಾನ-ಜೀವನ, ಆಶಾಭೋಗಗಳು ಶರತ್ಕಾಲದ ಮೇಘಗಳಂತೆ, ವಿತ್ತ-ಪುತ್ರ-ಹೆಂಡತಿ-ಸೇವಕರು ಸ್ವಪ್ನದಂತಿರುವರು ಎಂದು ನಾನು ಅರಿತಿದ್ದೇನೆ.' ಎಂದನು. ಇದರಿಂದ ಪ್ರಭಾವಿತನಾಗಿ ದೇವಶರ್ಮನು, ' ಅಲ್ಪವಯಸ್ಸಿನವನಾದ ನೀನು ಶಾಂತನಾಗಿ ಬಾಳುತ್ತಿರುವೆ, ಶಾರೀರಿಕ ಧಾತು (ವಸ್ತು) ಗಳು ಕ್ಷೀಣವಾಗುತ್ತ ಬರುವಾಗ ಶಾಂತಪ್ರಕೃತಿಯುಳ್ಳವನಾಗುವುದರಲ್ಲಿ ಆಶ್ಚರ್ಯವೇನಿದೆ ?' 'ಸತ್ಪುರುಷರಿಗೆ ವೃದ್ಧಾಪ್ಯವು ಮೊದಲಿಗೆ ಬುದ್ಧಿಯಲ್ಲೂ, ಅನಂತರ ಶರೀರದಲ್ಲೂ ಕಾಣಿಸಿಕೊಳುತ್ತದೆ, ಅಸತ್ ಪುರುಷರಿಗೆ ಬುದ್ಧಿ-ಶರೀರ ಯಾವುದರಲ್ಲೂ ತೋರಲು ಸಾಧ್ಯವಾ

ಗುವುದಿಲ್ಲ. ವೃದ್ಧಾಪ್ಯವು ಅನುಭವಗಳ ಆಕರವು. ನೀನು ಜ್ಞಾನಿಯೆ ನಿಸಲು ಅರ್ಹನಾಗಿರುವೆ,' ಎಂದನು. ಅವನಿಗೆ ದೀಕ್ಷೆಯಿತ್ತು ತನ್ನ ಶಿಷ್ಯ ನನ್ನಾಗಿ ಸ್ವೀಕರಿಸಿದನು. ಮುಂದೆ ಸಮಯ ಕಾಯುತ್ತಿದ್ದು ಆಷಾಢ ಭೂತಿಯು ದೇವಶರ್ಮನ ಹಣವನ್ನು ಅಪಹರಿಸಿದನು.

4) ದೇವಶರ್ಮನು ಆಷಾಢಭೂತಿಯಿಂದ ವಂಚಿತನಾದುದು ಹೇಗೆ ?
ಉತ್ತರ : (ಸೂ : 'ಪಾಠಸಂಕ್ಷೇಪದ 3 ನೇ ಭಾಗವನ್ನು ಬರೆಯಿರಿ.)

ಖ) ಸಂದರ್ಭ ವಾಕ್ಯಗಳು : [ ಸೂಚನೆ : ಮೊದಲು ಈ ಅಂಶ ವನ್ನು ಬರೆಯಿರಿ : ಈ ವಾಕ್ಯಾಂಶವನ್ನು , 'ಪಂಚತಂತ್ರ'ದ ' ಧಿಗರ್ಥಾಃ ಕಷ್ಟಸಂಶ್ರಯಾಃ' ಭಾಗದಿಂದ ಆರಿಸಲಾಗಿದೆ. ]

1) धिक् अर्थाः कष्टसंश्रयाः ।

ಈ ಮಾತನ್ನು ದೇವಶರ್ಮನು ತನ್ನಲ್ಲಿ ತಾನೇ ಹೇಳಿಕೊಂಡಿದ್ದಾನೆ. (ಪಾಠಸಂಕ್ಷೇಪದ 1 ನೇ ಭಾಗವನ್ನು ಸೇರಿಸಿರಿ.)

2) धातुषु क्षीयमाणेषु शमः कस्य न जायते ?

ಈ ವಾಕ್ಯವನ್ನು ದೇವಶರ್ಮನು, ಆಷಾಢಭೂತಿಗೆ ಹೇಳಿದ್ದಾನೆ. ಪೂರ್ವವಯಸ್ಸಿನವನಾದ ನಿನಗೇ ಶಾಂತಿಪ್ರಾಪ್ತಿಯಾಗಿರುವಾಗ ಶಾರೀರಿಕ ರಕ್ಷಣಾ ವಸ್ತುಗಳು ನಾಶವಾದಾಗ ಶಾಂತಿ ಪ್ರಾಪ್ತಿ ಬರುವುದರಲ್ಲಿ ಆಶ್ಚರ್ಯ ವೇನಿದೆ ! ಇದು (ವೃದ್ಧಾಪ್ಯ)ಸಾಧಾರಣ ಧರ್ಮವು.

3) असतां तु पुनः काये नैव चित्ते कदाचन ।

ಈ ಮಾತನ್ನು , ದೇವಶರ್ಮನು, ಆಷಾಢಭೂತಿಗೆ ಹೇಳಿದ್ದಾನೆ. ವೃದ್ಧಾಪ್ಯವು ಮೊದಲು ಬುದ್ಧಿಗೂ ಅನಂತರ ಶರೀರಕ್ಕೂ ಬರುತ್ತದೆ. ಇದು ಒಂದು ರೀತಿಯ ಜ್ಞಾನಿಯ ಲಕ್ಷಣವೇ ಸರಿ. ಆದರೆ ಕೆಟ್ಟವನಿಗೆ ಬುದ್ಧಿಯಲ್ಲಿ ವೃದ್ಧಾಪ್ಯವು (ಜ್ಞಾನ ಸಂಪಾದನೆ) ಬರುವುದಿಲ್ಲ. ಆದರೆ ಶರೀರದಲ್ಲಿ ಬರುತ್ತದೆ.

4) 1. दुर्मन्त्रा ....... खलोपासनात् ॥ (ಶ್ಲೋಕ 7)

2. मैत्री ........ प्रमादाद्धनम् ॥ (ಶ್ಲೋಕ 7)

ಈ ಮಾತುಗಳನ್ನು, ದೇವಶರ್ಮನು, ಆಷಾಢಭೂತಿಗೆ ಹೇಳಿದ್ದಾನೆ (ಸೂ: ಪಾಠಸಂಕ್ಷೇಪದ 2 ನೇ ಭಾಗವನ್ನು ಸೇರಿಸಿರಿ.)

5) 1. असार: ........ 2. गिरिनदी ........

3. तृणाग्नि ....... 4. शरदभ्र ........

5. स्वप्न ........

(ಪಠ್ಯಗ್ರಂಥದ ಪುಟ 8 ರಲ್ಲಿ ನೋಡಿ.)

ಈ ವಾಕ್ಯವನ್ನು, ಆಷಾಢಭೂತಿಯು, ದೇವಶರ್ಮನಿಗೆ ಹೇಳಿದನು.

(ಸೂ: 3 ನೇ ಪ್ರಶ್ನೆಯ ಉತ್ತರವನ್ನು ನೋಡಿರಿ)

6) 1. अहो न ........ 2. तत्किं दिवापि ........

3. किं वा विषं .... 4. किं वा पशुधर्मेण ....

( ಪಠ್ಯಗ್ರಂಥದ ಪುಟ 9 ರಲ್ಲಿ ನೋಡಿರಿ)

ಈ ವಾಕ್ಯವನ್ನು, ಆಷಾಢಭೂತಿಯು, ತನಗೆ ತಾನೇ ಹೇಳಿಕೊಂಡಿರುತನು. ದೇವಶರ್ಮನು, 'ನನ್ನನ್ನು ನಂಬುತ್ತಿಲ್ಲವು. ಇವನು ಹೇಗೆ ನನ್ನನ್ನು ನಂಬಿಯಾನು ! ಶಸ್ತ್ರದಿಂದ ಹಗಲಿನಲ್ಲೇ ಘಾತಿಸಲೇ ! ವಿಷಪಾನ ಮಾಡಿಸಲೆ ! ಅಥವಾ ಪಶುಧರ್ಮದಿಂದ ಕೊಂದು ತಿಂದುಬಿಡಲೆ ! ಎಂದು ಹೇಳಿಕೊಂಡಿದ್ದಾನೆ.

5. ವ್ಯಾಕರಣಾಂಶಗಳು :

1) ವ್ಯಾಕರಣ ವಿಶೇಷ : 1. प्रतिवसति स्म — ವರ್ತಮಾನ ಕ್ರಿಯಾಪದಕ್ಕೆ 'ಸ್ಮ' ಯೋಗದಿಂದ ಭೂತಕಾಲದ ಅರ್ಥವನ್ನು ಕಲ್ಪಿಸಲಾಗುತ್ತದೆ. 2) प्रणम्य — ಲ್ಯಬಂತಾವ್ಯಯ.

2) ಕ್ರಿಯಾರೂಪಗಳು : (ರೂಪ ಗುರುತಿಸಿ) 1) विश्वसिति–

ವಿ+ಶ್ವಸ್ ಧಾತುವಿನ ಲಟ್ ಲಕಾರ, ಪ್ರಥಮ ಪುರುಷ ಏಕವಚನ. 2) व्यचिन्तयत् – ವಿ+ಚಿಂತ್ ಧಾತುವಿನ ಲಙ್ ಲಕಾರ, ಪ್ರಥಮ ಪುರುಷ, ಏಕವಚನ. 3) स्यात् – ಅಸ್ ಧಾತುವಿನ ವಿಧಿಲಿಙ್ ರೂಪ ಪ್ರಥಮ ಪುರುಷ, ಏಕವಚನ. 4) सम्पद्यते – ಸಮ್ + ಪದ್ ಧಾತು ವಿನ ಲಟ್ ಲಕಾರ, ಪ್ರಥಮ ಪುರುಷ, ಏಕವಚನ. 5) श्रूयताम् – ಶ್ರು ಧಾತುವಿನ ಕರ್ಮಣಿ ಲೋಟ್ ಲಕಾರ ಪ್ರಥಮ ಪುರುಷ, ಏಕವಚನ. 6) दद्यात् – ದಾ ಧಾತುವಿನ ವಿಧಿಲಿಙ್ ರೂಪ, ಪ್ರಥಮಪುರುಷ, ಏ.ವ.

6) ಕಠಿಣ ಪದಗಳ ಅರ್ಥ : विविक्तप्रदेशे – ನಿರ್ಜನಪ್ರದೇಶದಲ್ಲಿ परिव्राजकः–ಸಂನ್ಯಾಸಿ नक्तन्दिवम्–ಹಗಲುರಾತ್ರಿ आर्जिताम्–ಸಂಪಾದಿಸಲಾದ सप्रश्रयम्–ವಿನಯಪೂರ್ವಕವಾಗಿ प्रथमे वयसि– ತಾರುಣ್ಯದಲ್ಲಿ खलः–ದುರ್ಜನ अनवेक्षणात् – ನೋಡದೆಯೇ हुडुयुद्धम्– ಟಗರುಗಳ ಹೋರಾಟವನ್ನು जम्बुकः–ನರಿ मुषितः–ವಂಚಿತನಾದವನು ಆದನು.

## ಪಾಠ 4 दत्तभुक्तफलं धनम्

## [ ದಾನ ಮತ್ತು ಉಪಭೋಗವೇ ಧನಸಂಗ್ರಹದ ಫಲವು ]

1. ಅವತರಣಿಕೆ : ಈ ಜಗತ್ತಿನಲ್ಲಿ ಹಣಸಂಪಾದನೆಗಾಗಿ ಎಲ್ಲರೂ ಪ್ರಯತ್ನಿಸುತ್ತಾರೆ. ಕೆಲವರು, ಸಂಪಾದಿಸಿದ್ದನ್ನು ಖರ್ಚುಮಾಡುತ್ತಾರೆ. ಕೆಲವರು ಹಣವನ್ನು ಜಿಪುಣತನದಿಂದ ಕೂಡಿಸಿ ಮುಚ್ಚಿಡುತ್ತಾರೆ. ಹಣದ ನೈಜ ಉಪಯೋಗ ಯಾವುದು ? ಇದೇ ಒಂದು ಸಮಸ್ಯೆ. ದಾನ ಮತ್ತು ಭೋಗವೇ ಹಣದ ನೈಜ ಉಪಯೋಗವು ಈ ವಿಷಯವನ್ನು ' ದತ್ತ ಭುಕ್ತಫಲಂ ಧನಮ್ ' ಎಂಬ ' ಪಂಚತಂತ್ರ'ದ ಕಥೆಯೊಂದರಿಂದ ತಿಳಿಯಬಹುದಾಗಿದೆ.

2. ' ಪಂಚತಂತ್ರ' : ( ಸೂ : 3 ನೇ ಪಾಠದಲ್ಲಿ ಓದಿರಿ)

3. ಪಾಠಸಂಕ್ಷೇಪ : 1) ನೇಕಾರ ಸೋಮಿಲಕ ಉತ್ತಮ ಕಲೆ

ಗಾರಿಕೆಯುಳ್ಳವನಾಗಿದ್ದರೂ ಹೊಟ್ಟೆಯ ತುಂಬ ಸಂಪಾದಿಸದಾದನು. ಕಲೆಗಾರಿಕೆ ಅರಿಯದ ಇತರ ನೇಕಾರರು ಬಹುನಾಗಿ ಸಂಪಾದಿಸುತ್ತಿದ್ದರು. ಬೇಸರಗೊಂಡು ಹಣ ಸಂಪಾದಿಸಲು ಸೋಮಿಲಕನು, 'ಇಲ್ಲೇ ಇದ್ದು ಶ್ರಮಿಸು' ಎಂಬ ಹೆಂಡತಿಯ ಮಾತು ಕೇಳದೆ ದೇಶಾಂತರಕ್ಕೆ ತೆರಳಿದನು. ದೇಶಾಂತರದಿಂದ ಎರಡು ಮೂರು ಬಾರಿ ಧನಸಂಪಾದಿಸಿಕೊಂಡು ಊರಿಗೆ ಹಿಂದಿರುಗಿದನು. ದಾರಿಯಲ್ಲಿ ಅದೃಷ್ಟದೇವತೆಗೂ,ಕರ್ಮದೇವತೆಗೂ ಚರ್ಚೆ ನಡೆದು ಶ್ರಮಿಸಿದ್ದಕ್ಕೆ ತಕ್ಕಷ್ಟು ಕೊಡಬೇಕಾದುದು ನನ್ನ ಕರ್ತವ್ಯ ಎಂದು ಅದೃಷ್ಟ ದೇವತೆಯು ವಾದಿಸಿತು, ಕರ್ಮದೇವತೆಯು ಅನ್ನಬಟ್ಟೆಗಾಗುವುದಷ್ಟೇ ಧನ ಪ್ರಾಪ್ತಿ ಇವನ ಭಾಗ್ಯದ್ದು ಎಂದು ವಾದಿಸಿತು. 'ನಾನು ಕೊಟ್ಟಿದ್ದೇನೆ, ಉಳಿಸುವುದು, ಉಳಿಸದೇ ಬಿಡುವುದು ನಿನಗೆ ಸೇರಿದ್ದು' ಎಂದು ಕರ್ಮದೇವತೆಯು ಅದೃಷ್ಟದೇವತೆಗೆ ಹೇಳಿತು. ಅದೃಷ್ಟದೇವತೆಯ ಚೇಷ್ಟೆಯಿಂದ ಸೋಮಿಲಕನ ಸಂಪಾದನೆ ಮಾಯವಾಯಿತು.

2) ಅದೃಷ್ಟದೇವತೆಯಿಂದ ಧನವು ಅಪಹೃತವಾದುದನ್ನು ಕಂಡು ಆಲದ ಮರಕ್ಕೆ ನೇಣುಹಾಕಿಕೊಂಡು ಸೋಮಿಲಕನು ಸಾಯಲು ಪ್ರಯತ್ನಿಸಿದನು. ಕರ್ಮದೇವತೆಯು, ಪ್ರತ್ಯಕ್ಷವಾಗಿ, 'ಪ್ರಾಣತ್ಯಾಗ ಮಾಡಬೇಡ. ನಿನ್ನ ಅದೃಷ್ಟದಲ್ಲಿರುವಷ್ಟು ಮಾತ್ರ ನಿನಗೆ ಪ್ರಾಪ್ತಿ. ಹೆಚ್ಚು ಸಾಧ್ಯವಿಲ್ಲ, ನಿನ್ನ ವಿಷಯದಲ್ಲಿ ಪ್ರಸನ್ನನಾಗಿದ್ದೇನೆ, ವರ ಕೇಳಿಕೋ' ಎಂದ. 'ಅಧಿಕ ಹಣ ಬೇಕು. ನಾನು ಉಪಭೋಗಿಸದಿದ್ದರೂ ಚಿಂತೆಯಿಲ್ಲ'ವೆಂದನು ಸೋಮಿಲಕ. ಕರ್ಮದೇವತೆಯು, ಸೋಮಿಲಕನನ್ನು "ವರ್ಧಮಾನಪುರದ 'ಜಿಪುಣ ಮತ್ತು ಉದಾರಿಯ' ದರ್ಶನ ಮಾಡಲು ಕಳುಹಿಸಿತು."

ಭುಕ್ತಧನವುಳ್ಳವನು ವ್ಯಯಮಾಡಿ ಸೋಮಿಲಕನಿಗೆ ಸೇವೆ ಸಲ್ಲಿಸಿದ್ದನು. ಮರುದಿವಸ ಧನವ್ಯಯಕ್ಕಾಗಿ ಭುಕ್ತಧನನಿಗೆ ರಾಜಕೋಶದಿಂದ ಧನಪ್ರಾಪ್ತಿಯಾಯಿತು. ಜಿಪುಣನು, ಸೋಮಿಲಕನಿಗೆ ಭೋಜನಮಾಡಿಸಲು ಸಿದ್ಧನಿರಲಿಲ್ಲ. ಆದರೂ ಬಲಾತ್ಕಾರದಿಂದ ಆವನ ಮನೆಯಲ್ಲಿ ಸೋಮಿಲಕನು ಭೋಜನಮಾಡಿದ್ದನು. ಇದರಿಂದ ಜಿಪುಣನು ಹೊಟ್ಟೆನೋವಿನಿಂದ ಉಪವಾಸ ಮಾಡುವಂತಾಯಿತು.

3) ಸೋಮಿಲಕನು, ಅದೃಷ್ಟದೇವತೆ – ಕರ್ಮದೇವತೆಯು ಪ್ರಾತನ್ನು ಲಾಲಿಸಿ ಈ ಮುಂದಿನ ತೀರ್ಮಾನಕ್ಕೆ ಬಂದನು : 'ನನ್ನಲ್ಲಿ ಹಣವು ಕೂಡದಿದ್ದರೂ ಚಿಂತೆಯಿಲ್ಲ, ಬಚ್ಚಿಡುವ ಹಣಕ್ಕಿಂತ ಉಪಭೋಗಿಸುವ ಹಣ ಬೇಕು.' ಇದಕ್ಕೆ ಇಷ್ಟು ಕಾರಣ : "ವೇದಾಧ್ಯಯನದಿಂದ ಅಗ್ನಿಹೋತ್ರ (ಹೋಮದ) ಫಲಪ್ರಾಪ್ತಿಯಾಗುತ್ತದೆ. ಉಪನಿಷದಾದಿಗಳ ಅಧ್ಯಯನವು ಸಚ್ಚಾರಿತ್ರ್ಯವನ್ನು ಕೊಡುತ್ತದೆ, ಪತ್ನಿಪ್ರಾಪ್ತಿಯು ಸುಖ, ಸುತರನ್ನು ಕೊಡುವಂಥದು, ಇದೇ ತೆರದಲ್ಲಿ ದಾನ ಮಾಡುವ ಮತ್ತು ಭೋಗಿಸಲ್ಪಡುವುದೇ ಧನಸಂಚಯದ ಫಲಪ್ರಯೋಜನವು" ಸೋಮಿಲಕನು (ಅವನು) ಕರ್ಮದೇವತೆಯನ್ನು ಹೀಗೆ ವರವನ್ನು ಕರುಣಿಸೆಂದು ಬೇಡಿದನು. 'ಪರಬ್ರಹ್ಮನು ನನಗೆ ದಾನಮಾಡುವ ಮತ್ತು ಭೋಗಿಸಲರ್ಹವಾದ ಧನವನ್ನು ಕರುಣಿಸುವಂತಾಗಲಿ.'

4. ಕ) ಪ್ರಶ್ನೋತ್ತರ :

1) ಸೋಮಿಲಕನು ಯಾರು ? ಆವನ ಗೃಹತ್ಯಾಗಕ್ಕೆ ಕಾರಣವೇನು ? ಅವನಿಗೆ ಅವನ ಪತ್ನಿಯು ಸಲಹೆ ಏನು ?

2) ಸೋಮಿಲಕನ ಧನಸಂಚಯವು ಹೇಗೆ ಮಾಯವಾಯಿತು ? ಇದಕ್ಕೆ ಕಾರಣವೇನಿತ್ತು ?

[ ಸೂಚನೆ : ಪಾಠಸಂಕ್ಷೇಪದ 1 ನೇ ಭಾಗದಲ್ಲಿ ಮೇಲಿನ ಎರಡೂ ಪ್ರಶ್ನೆಗಳಿಗೂ ಉತ್ತರವಿದೆ ನೋಡಿ ]

3) ಸೋಮಿಲಕನ ಕಷ್ಟಾರ್ಜಿತಧನವು ಮಾಯವಾದಾಗ ಇವನೇನು ಮಾಡಿದನು ? ಕರ್ಮದೇವತೆಯು ಸೋಮಿಲಕನಿಗೆ ಹೇಳಿದುದೇನು ? ಇದರ ಪರಿಣಾಮವೇನಾಯಿತು ?

[ ಸೂಚನೆ : ಪಾಠಸಂಕ್ಷೇಪದ 3 ಮತ್ತು 4 ನೇ ಭಾಗವನ್ನು ಬರೆಯಿರಿ.]

ಖ) ಸಂದರ್ಭ ವಾಕ್ಯಗಳು :

(ಸೂ : ಮೊದಲು ಬರೆಯಿರಿ : ಈ ವಾಕ್ಯವನ್ನು 'ಪಂಚತಂತ್ರ'ದಿಂದ

ಆರಿಸಲಾದ ' ದತ್ತಭುಕ್ತಫಲಂ ಧನಂ ' ಎಂಬುದರಿಂದ ಆರಿಸಲಾಗಿದೆ. )

1) 'यथा अवश्यं दातव्यं व्यवसायिनां,
तत्र च तस्य परिणतिः त्वदायत्ता' —

ಕರ್ಮದೇವತೆಯನ್ನು, ಅದೃಷ್ಟದೇವತೆಯು ಪ್ರಶ್ನಿಸಿತು : 'ಊಟ ಬಟ್ಟೆ ಪ್ರಾಪ್ತಿಯೋಗವುಳ್ಳವನಿಗೆ ನೀನು ಏಕೆ ಅಧಿಕಹಣವನ್ನು ಕರುಣಿಸಿದೆ' ಈ ಮಾತಿಗೆ ಉತ್ತರವಾಗಿ ಕರ್ಮದೇವತೆಯು ಹೀಗೆ ಹೇಳಿತು : 'ಶ್ರಮಿಸುವವನ ಶ್ರಮಕ್ಕೆ ಫಲ ಕೊಡುವುದು ನನ್ನ ಕೆಲಸ, ಫಲವನ್ನು ಉಳಿಸುವುದು ಅಥವಾ ನಾಶಗೊಳಿಸುವುದು ನಿನ್ನನ್ನು ಅವಲಂಬಿಸಿದೆ.'

2) 1. 'महता कष्टेन उपार्जितं .... दर्शयिष्यामि'
2. 'अहो ! किं मम धनरहितस्य जीवितेन ?'
(ಪುಟ 13)

ಸೋಮಿಲಕನು, ತನ್ನ ಹಣದ ಗಂಟು ಅದೃಷ್ಟದೇವತೆಯಿಂದ ಕಾಣದಂತೆ ಆಗಲು, ವ್ಯಥೆಯಿಂದ ಈ ಮಾತನ್ನು ತನಗೆ ತಾನೇ ಹೇಳಿಕೊಂಡಿದ್ದಾನೆ. 'ಕಷ್ಟಾರ್ಜಿತ ಹಣವನ್ನು ಕಳೆದುಕೊಂಡು ನಾನು ಮನೆಗೆ ಹಿಂದಿರುಗಿ ಪತ್ನಿಪುತ್ರಬಾಂಧವರಿಗೆ ಹೇಗೆ ಮುಖ ತೋರಿಸಲಿ !' ಹಣವಿಲ್ಲದವನ ಬಾಳು ಹೆಣಕ್ಕೆ ಸಮಾನವಷ್ಟೆ.

3) 'भोः ! किं करिष्यसि ........ नास्ति' ।
(ಪುಟ 13)

ಸೋಮಿಲಕನು ಆಲದಮರಕ್ಕೆ ನೇಣುಹಾಕಿಕೊಂಡು ಸಾಯಲೆತ್ನಿಸಿದಾಗ, ಕರ್ಮದೇವತೆಯು, ದರ್ಶನಕೊಟ್ಟು, ಹೇಳಿದ ಮಾತಿದು. 'ನನಗೆ ಹಣವನ್ನು ಕರುಣಿಸೆಂದು' ಸೋಮಿಲಕನು, ಕೇಳಿದುದಕ್ಕೆ ಭೋಗಕ್ಕಾಗದ ಹಣದಿಂದ ಏನು ಪ್ರಯೋಜನ ! ನಿನ್ನ ಅದೃಷ್ಟದಲ್ಲಿ ಹೊಟ್ಟೆ–ಬಟ್ಟೆಗಾಗುವಷ್ಟು ಮಾತ್ರ ಹಣ ದೊರೆಯುವ ಭಾಗ್ಯವಿದೆ' ಎಂದು ಕರ್ಮದೇವತೆ ಹೇಳಿತು.

4) 'वेश्येव ... .... भुज्यते'' (ಪುಟ : 13)

ಸೋಮಿಲಕನು ಆಲದಮರಕ್ಕೆ ನೇಣುಹಾಕಿಕೊಂಡು ಸಾಯಲೆತ್ನಿಸಿದಾಗ, ಕರ್ಮದೇವತೆಯು, ದರ್ಶನಕೊಟ್ಟು, ಹೇಳಿದ ಮಾತಿದು. 'ನನಗೆ ಹಣವನ್ನು ಕರುಣಿಸೆಂದು' ಸೋಮಿಲಕನು, ಕೇಳಿದುದಕ್ಕೆ ಭೋಗಕ್ಕಾಗದ ಹಣದಿಂದ ಏನು ಪ್ರಯೋಜನ ! ನಿನ್ನ ಅದೃಷ್ಟದಲ್ಲಿ ಹೊಟ್ಟೆ-ಬಟ್ಟೆಗಾಗುವಷ್ಟು ಮಾತ್ರ ಹಣ ದೊರೆಯುವ ಭಾಗ್ಯವಿದೆ' ಎಂದು ಕರ್ಮದೇವತೆ ಹೇಳಿತು. ಮುಂದುವರಿದು ಹೀಗೆ ಹೇಳಿತು : 'ನಮ್ಮ ಉಪಭೋಗಕ್ಕಾಗದ ಹಣವನ್ನು ಕೂಡಿಡುವುದರಿಂದ ಅದನ್ನು, ಅನಾಯಾಸವಾಗಿ ದೊರೆಯುವ ಹೆಣ್ಣನ್ನು ಎಲ್ಲರೂ ಉಪಭೋಗಿಸುತ್ತಾರೆ, ನಿನಗೆ ಮಾತ್ರ ಆದರಿಂದ ಪ್ರಯೋಜನವಿಲ್ಲವು.'

5) 1. 'यद्यपि भोगी नास्ति तथापि तद्भवतु'

2. 'कृपणोऽप्यकुलीनोऽपि .... वित्तसञ्चयः'

ಸೋಮಿಲಕನು, ಕರ್ಮದೇವತೆಯಿಂದ, ಭಾಗ್ಯದಲ್ಲಿ ಭೋಗಿಸಲು ಸಾಧ್ಯವಿಲ್ಲದ ಹಣಪ್ರಾಪ್ತಿ ಬಗೆಗೆ ತಿಳಿದುಕೊಂಡೂ ಸಹ, ತನಗೆ ಆ ಹಣದ ಅದೃಷ್ಟಬೇಕು. ಏಕೆಂದರೆ ಹಣವುಳ್ಳ ಜಿಪುಣನೂ, ಅಕುಲೀನನೂ ಸಜ್ಜನ ಮಾನ್ಯನೆನಿಸುತ್ತಾನೆ. ಮಾನವನ ಮಾನ ಸನ್ಮಾನ ಕೇವಲ ಹಣವನ್ನು ಅವಲಂಬಿಸಿದೆ,' ಎಂದು ಕರ್ಮದೇವತೆಯನ್ನು ಕೇಳಿದನು, ಬೇಡಿದನು.

6) 1. 'सञ्चयरहितोऽपि .... गुप्तधनः ।'

2. 'तद्विधाता ........ गुप्तधनेन ।'

(ಸೂ : ಪಾಠಸಂಕ್ಷೇಪದ 3 ನೇ ಭಾಗವನ್ನು ಬರೆಯಿರಿ.)

5. ವ್ಯಾಕರಣಾಂಶಗಳು :

1) ವ್ಯಾಕರಣರೀತ್ಯಾ ಶಬ್ದಗಳನ್ನು ಗುರುತಿಸುವುದು :

1) कर्तः – ಕರ್ತೃ ಶಬ್ದದ ಸಂಬೋಧನ ಪ್ರಥಮಾ ವಿ. ಏಕವಚನ

2) दाराः – ನಿತ್ಯ ಪುಲ್ಲಿಂಗ ಬಹುವಚನ.

2) ಕ್ರಿಯಾರೂಪಗಳು : उपालप्स्यसि – ಉಪ + ಆ + ಲಭ್

ಇಂಥ ಘೋರಸನಿದ್ರೆ ಇದು. ಸ್ವಾಮೀ, ಚಿತ್ತಗೊಟ್ಟು ಆಲಿಸಬೇಕು. ಆಗರ್ಭ ಶ್ರೀಮಂತತನ, ನೂತನ ತಾರುಣ್ಯ, ಅನುಪಮ ಸೌಂದರ್ಯ, ಅಲೌಕಿಕ ಸಾಮರ್ಥ್ಯ, ಇವುಗಳಲ್ಲಿ ಮನುಷ್ಯನಿಗೆ ಒಂದು ಇದ್ದರೂ ಅವನನ್ನು ನಾಶಗೊಳಿಸುವುದಕ್ಕಾಗಲಿ, ಅವಿಚಾರಕ್ಕೊಳಗುಮಾಡುವುದಕ್ಕಾಗಲಿ ಸಾಕು ಇವೆಲ್ಲ ಒಂದೇ ಸ್ಥಳದಲ್ಲಿ ಒಟ್ಟುಗೂಡಿದರಂತೂ ಕೇಳುವದೇನು ?

ಸುಶಿಕ್ಷಿತ ಮನುಷ್ಯನಾದರೂ ತಾರುಣ್ಯವೊದಗಿದ ಮೇಲೆ ಅವನಿಂದೇನಾದೀತು ಏನಾಗದೆಂಬ ನಿಯಮವಿಲ್ಲ ವಿಷಯಾರಣ್ಯದೊಳಗೆ ಮನುಷ್ಯನ ಇಂದ್ರಿಯಗಳೆಂಬ ಎರಳೆಗಳು ಸುಖೋಪಭೋಗವೆಂಬ ಮೃಗಜಲಕ್ಕೆಳಸಿ ಪರಿದಾಡುತ್ತವೆ. ಮೊದಲು ತುಚ್ಛವಾಗಿಯೂ ನೀರಸವಾಗಿಯೂ ತೋರುವ ವಿಷಯಗಳೇ ಮುಂದೆ ಯೌವನ ಮದದ ಮಬ್ಬು ತಲೆಗೇರಿದಾಗ ಇಂಪಾಗಿಯೂ ಪ್ರಿಯಕರವಾಗಿಯೂ ತೋರುವವು. ಇಂಥ ಸದುಪದೇಶವು ನಿಮ್ಮಂಥ ವಿಚಕ್ಷಣರ ಮನಸ್ಸಿಗೆ ಹತ್ತಿದ ಹಾಗೆ ಅಶಿಕ್ಷಿತರ ಮನಸ್ಸಿಗೂ, ದುಷ್ಟರ ಮನಸ್ಸಿಗೂ ಹತ್ತುವುದಿಲ್ಲ. ಇದಲ್ಲದೆ ನಿಮಗೆ ಉಪದೇಶ ಮಾಡತಕ್ಕ ಕಾಲವು ಇದೇ ಸರಿ; ಏಕೆಂದರೆ ಇನ್ನೂ ನಿಮಗೆ ವಿಷಯರಸದ ಸವಿ ಹತ್ತಿಲ್ಲ. ಇಂಥ ಸದುಪದೇಶವು ಕಾಮನ ಕೂರಂಬುಗಳು ನೆಟ್ಟವರ ಮನಸ್ಸಿಗೆ ನಡುವುದಿಲ್ಲ; ದೊಡ್ಡ ಮನೆತನದಲ್ಲಿ ಹುಟ್ಟಿದವರು ದುರ್ಮಾರ್ಗದಿಂದ ನಡೆಯುವುದಿಲ್ಲೆಂದು ಅನ್ನಕೂಡದು ; ಚಂದನ ವೃಕ್ಷದಿಂದ ಹುಟ್ಟಿದ ಬೆಂಕಿ ಸುಡುವುದಿಲ್ಲವೆನ್ನಬಹುದೋ ? ಮತ್ತು ಸುಶಿಕ್ಷಿತ ಮನುಷ್ಯನು ಸನ್ಮಾರ್ಗದಿಂದಲೇ ನಡೆಯುವನೆಂಬ ನಿಶ್ಚಯವಿಲ್ಲ; ನೋಡಿರಿ ನೀರಿನಿಂದ ಬೆಂಕಿಯು ಆರುವುದು; ಆ ನೀರಿನಿಂದಲೇ ವಡಬಾಗ್ನಿಯು ಪ್ರಜ್ವಲಿಸುವುದು. ಆದುದರಿಂದ ಮಾನವ ಪ್ರಾಣಿಗಳು ಗುರುಗಳ, ಹಿರಿಯರ ಹಿತೋಪದೇಶಗಳಿಗೆ ಯಾವಾಗಲೂ ಕಿವಿಗೊಡುತ್ತ ನಾನು ನನ್ನದೆಂಬ ಅಹಂಕಾರ ಮಮಕಾರಗಳಿಗೆ ಒಳಗಾಗದೆ, ಬಹಳ ಎಚ್ಚರದಿಂದ ವರ್ತಿಸಬೇಕು. ಗುರೂಪದೇಶಗಳನ್ನು ಕೇಳುವುದೇ ಕಿವಿಗೆ ಭೂಷಣವು.

ಅರಸನ ಮಾತಿಗೆ ತಲೆದೂಗುವವರೇ ಬಹಳ ಮಂದಿ. ನಿಸ್ಪೃಹತೆ

ಯಿಂದ ಅರಸನಿಗೆ ಅಂಜದೆ ಬುದ್ಧಿಯನ್ನು ಹೇಳುವವರು ಬಹಳ ಅಪರೂಪ. ಅಂಥದರೊಳಗೂ ದೈವಯೋಗದಿಂದ ಯಾವನಾದರೊಬ್ಬನು ಗಂಟುಬಿದ್ದರೂ ಪ್ರಯೋಜನವೇನು ? ಗರ್ವರೂಪ ಮಲದಿಂದ ಅರಸರ ಕಿವಿಗಳು ಗಡದು ಹಾಕಿರುತ್ತವೆ; ಅದರಿಂದ ಆತನು ಹೇಳಿದ ಬುದ್ಧಿಯ ಮಾತುಗಳು ವ್ಯರ್ಥವಾಗುವವು. ಮುಖಸ್ತುತಿ ಮಾಡುವವರ ಮರುಳು ಮಾತುಗಳಿಗೆ ಮೋಹಿತರಾದ ಅರಸರ ಮನಸ್ಸು ಗುರುಹಿರಿಯರ ಸದುಪ ದೇಶಕ್ಕೆ ಎಳಸುವುದಿಲ್ಲ. ಅಂಥವರಿಗೆ ಹೇಳುವ ಉಪದೇಶವು ಬುಡಮೇಲು ಮಾಡಿದ ಕೊಡದ ಮೇಲೆ ಹನಿಸಿದ ನೀರಿನಂತೆ ವ್ಯರ್ಥವೇ ಸರಿ ; ಆದುದ ರಿಂದ ಉಪದೇಶಕನಿಗೆ ಮಾತ್ರ ಖೇದವಾಗುವುದೇ ಹೊರತು ಬೇರೆ ಏನೂ ಫಲವಿಲ್ಲ. ಜೀಯಾ, ಲಕ್ಷ್ಮಿಯು ಪ್ರಾಪ್ತವಾದಾಗ ಜನರು ಒಣ ಹೆಮ್ಮೆ ಮಾಡುತ್ತಾರೆ.

ಲಕ್ಷ್ಮಿಯ ದುರ್ಗುಣಗಳನ್ನು ಹೇಳುತ್ತೇನ್ ಕೇಳಿರಿ. ಇಂಗಡಲೊಳ ಗಿಂದ ಹುಟ್ಟುವಾಗಲೇ ಈಕೆಗೆ ಒಡಹುಟ್ಟಿದವರ ನೆರಳು ಬಿತ್ತೋ ಏನೋ ಅನ್ನುವ ಹಾಗೆ ಚಂದ್ರನ ಕಲೆಯಿಂದ ವಕ್ರತ್ವವು, ಪಾರಿಜಾತ ವೃಕ್ಷದ ಪಲ್ಲವದಿಂದ ರಾಗವು, ಉಚ್ಚೈಃಶ್ರವದಿಂದ ಚಪಲತೆಯು, ಕಾಲಕೂಟವಿಷ ದಿಂದ ಮೋಹನ ಶಕ್ತಿಯು, ಮದ್ಯದಿಂದ ಮದವು, ಕೌಸ್ತುಭಮಣಿಯಿಂಡ ಕಾಠಿನ್ಯವು ಪ್ರಾಪ್ತವಾದವು. ಈಕೆ ಒಬ್ಬರನ್ನೂ ಲೆಕ್ಕಿಸುವುದಿಲ್ಲ. ನೋಡ ನೋಡಲು ಮಿಂಚಿನ ಹಾಗೆ ತೋರಿಯಡಗುವಳು. ಜಾಣರು ಸಿರಿಯನ್ನು ನೆಚ್ಚಬಾರದು. ಈ ಲಕ್ಷ್ಮಿಯ ಕುಟಿಲತನವನ್ನು ಎಷ್ಟು ಹೇಳಿದರೂ ತೀರದು. ಸ್ವಾಮೀ, ಇಂದು ಐಶ್ವರ್ಯದ ಶಿಖರಕ್ಕೆ ಏರಿಸಿದ ಮನುಷ್ಯ ನನ್ನೇ ನಾಳೆಗೆ ತೊಲಗಿ ಆತನನ್ನು ಮಣ್ಣುಪಾಲು ಮಾಡುತ್ತಾಳೆ. ಇಂಥ ದುಷ್ಟ ಲಕ್ಷ್ಮಿಯ ಗಾಳಿ ಒಮ್ಮೆ ಮೈ ಸೋಂಕಿದರೆ ಸಾಕು ; ಆ ಪುರುಷನು ವಿದ್ವಾಂಸನಿರಲಿ, ಜಾಣನಿರಲಿ, ಪರಾಕ್ರಮಿ ಇರಲಿ, ಕುಲೀನನಿರಲಿ, ಸುಶೀ ಲನಿರಲಿ, ಎಂಥವನಿದ್ದರೂ ಅವನ ಗುಣಗಳನ್ನು ಮಣ್ಣುಪಾಲು ಮಾಡು ತ್ತಾಳೆ. ಅವನ ಗುಣಗಳನ್ನು ಲೋಪಮಾಡಿ ಅವನಿಗೆ ವಿಪರೀತ ಬುದ್ಧಿ ಯನ್ನು ಹುಟ್ಟಿಸಿ, ಅವನನ್ನು ನಿಜವಾದ ಸುಖಕ್ಕೆ ಎರವು ಮಾಡುತ್ತಾಳೆ.

ರಾಜಲಕ್ಷ್ಮಿಯು ಅಭಿಷೇಕದಿಂದಲೇ ಅರಸರ ಸೌಜನ್ಯವು ತೊಳೆದುಹೋಗುವುದು. ಆಗಿನ ಹೋಮಾಗ್ನಿಯು ಹೊಗೆಯಿಂದ ಅವರ ನಿರ್ಮಲವಾದ ಹೃದಯವು ಮಲಿನವಾಗುವುದು; ಪುರೋಹಿತನು ದರ್ಭೆಯಿಂದ ಸಂಪ್ರೋಕ್ಷಣ ಮಾಡಿದ ಕೂಡಲೆ ಅರಸರ ಕ್ಷಮಾಗುಣವು ಲಯವಾಗುವುದು.

ತಲೆಯ ಮೇಲೆ ಕಿರೀಟ ಬಂದ ಕೂಡಲೆ ಮುಪ್ಪಿನಿಂದ ತಲೆ ಬೆಳ್ಳಗಾಗುವುದನ್ನು ಮರೆಯುತ್ತಾರೆ. ಛತ್ರ-ಹಿಡಿಸಿಕೊಂಡಾಗಲೇ ಅವರಿಗೆ ಪರಲೋಕವು ಮರೆಯಾಗುವುದು. ಚಾಮರದ ಗಾಳಿಗೆ ಅವರ ಸತ್ಯಶೀಲತ್ವವು ಹಾರಿಹೋಗುವುದು. ಚೋಪದಾರರ ಕೈಯೊಳಗಿನ ವೇತ್ರದಂಡದಿಂದ ಅರಸರ ಔದಾರ್ಯಾದಿಗುಣಗಳು ಅಡಗುವುವು. ಭಟ್ಟಂಗಿಗಳ ಜಯಜಯಕಾರ ಶಬ್ದಗಳೊಳಗೆ ಅವರು ಸಾಧು ಜನರ ಕಥೆಗಳಿಗೆ ಕಿವಿಗೊಡುವುದಿಲ್ಲ. ಇಷ್ಟೇ ಅಲ್ಲ, ಅವರು ಎಲ್ಲ ದುರ್ಗುಣಗಳಿಗೆ ತವರುಮನೆಯಾಗುವರು. ಜೂಜಾಡುವುದೇ ವಿನೋದವೆಂದೂ ವ್ಯಭಿಚಾರ ಮಾಡುವುದೇ ಚತುರತನವೆಂದೂ ಬೇಟೆಯಾಡುವುದೇ ಶರೀರಕ್ಕೆ ಪರಿಶ್ರಮವೆಂದೂ ಮದ್ಯಪಾನವೇ ತಕ್ಕ ವಿಲಾಸವೆಂದೂ ಗುರುಹಿರಿಯರ ಉಪದೇಶವನ್ನು ಅಲ್ಲಗಳೆಯುವುದೇ ಸ್ವಾತಂತ್ರ್ಯವೆಂದೂ ವೇಶ್ಯಾಂಗನೆಯರ ಗಾನ-ನೃತ್ಯಗಳಿಗೆ ಲುಬ್ಧರಾಗುವುದೇ ರಸಿಕತನವೆಂದೂ, ದೊಡ್ಡದೊಡ್ಡ ತಪ್ಪುಗಳನ್ನು ಉಪೇಕ್ಷಿಸುವುದೇ ಮನಸ್ಸಿನ ದೊಡ್ಡತನವೆಂದೂ ಜನರು ಹೇಳಿದಾಗ್ಯೂ ತಾವು ಸುಮ್ಮನೆ ಕಣ್ಣುಮುಚ್ಚಿಕೊಂಡಿರುವುದೇ ತಾಳ್ಮೆಯೆಂದೂ ಮನಸ್ಸಿಗೆ ಬಂದಂತೆ ಮಾಡುವುದೇ ಘನತೆಯೆಂದೂ ದೇವರಭಯವನ್ನು ತೊರೆದು ನಿಲ್ಲುವುದೇ ಪರಾಕ್ರಮವೆಂದೂ ಸ್ತುತಿಪಾಠಕರ ಕೊಂಡಾಟವೇ ಕೀರ್ತಿಯೆಂದೂ ಚಂಚಲತನವೇ ಉತ್ಸಾಹವೆಂದೂ ತಾರತಮ್ಯವರಿಯದಿರುವುದೇ ನಿಷ್ಪಕ್ಷಪಾತವೆಂದೂ ಅರಸರು ತಿಳಿದುಕೊಳ್ಳುತ್ತಾರೆ.

4. ಪ್ರಶ್ನೋತ್ತರ :

1) ಶುಕನಾಸನು, ಚಂದ್ರಾಪೀಡನಿಗೆ ಯೌವನ, ಧನಸಂಪತ್ತು, ಪ್ರಭುತ್ವ, ಅವಿವೇಕಗಳ ಬಗೆಗೆ ಏನೆಂದು ಉಪದೇಶಿಸಿದ್ದಾನೆ ?

ಉತ್ತರ : 1) ಚಂದ್ರಾಪೀಡನು, ಶುಕನಾಸನ ದರ್ಶನಕ್ಕೆ ಹೋದನು. ಶುಕನಾಸನು " ಯುವರಾಜರೇ, ತಾರುಣ್ಯದ ಯೋಗದಿಂದ ಪ್ರಾಪ್ತವಾಗುವ ತಮವು (ಅಜ್ಞಾನವು) ಉಳಿದ ಅಂಧಕಾರದಂತೆ ಸೂರ್ಯನ ಕಿರಣಗಳಿಂದೇನೂ ನಷ್ಟವಾಗುವುದಿಲ್ಲ. ಐಶ್ವರ್ಯದಿಂದ ಪ್ರಾಪ್ತವಾದ ಮದವು ಐಶ್ವರ್ಯ ಹೋದರೂ ಹೋಗುವುದಿಲ್ಲ. ಗರ್ವದಿಂದ ಹುಟ್ಟಿದ ತಾಪವು ಶೀತೋಪಚಾರಗಳಿಂದೇನೂ ಶಾಂತವಾಗುವುದಿಲ್ಲ ವಿಷಯವೆಂಬ ನಂಜಿನಿಂದ ಸಾಯುವುದು ನಿಶ್ಚಯವೆಂದು ತಿಳಿದರೂ ಮನುಷ್ಯರು ಅದರ ಸವಿ ತೆಗೆದುಕೊಳ್ಳದೆ ಬಿಡುವುದಿಲ್ಲ. ಕಾಮಲಂಪಟವೆಂಬ ಮಲಕ್ಕೆ ಒಳಗಾಗದವರು ಈ ಭೂಮಿಯ ಮೇಲೆ ಬಹಳ ವಿರಳ. ರಾಜ್ಯಸುಖವೆಂಬ ನಿದ್ದೆ ಹತ್ತಿದ ಬಳಿಕ ಬೆಳಗಾದರೂ ಎಚ್ಚರವಾಗುವುದಿಲ್ಲ. ಆಗರ್ಭ ಶ್ರೀಮಂತತನ, ನೂತನ ತಾರುಣ್ಯ, ಅನುಪಮ ಸೌಂದರ್ಯ, ಅಲೌಕಿಕ ಸಾಮರ್ಥ್ಯ, ಇವುಗಳಲ್ಲಿ ಮನುಷ್ಯನಿಗೆ ಒಂದು ಇದ್ದರೂ ಅವನನ್ನು ನಾಶಗೆ ಳಿಸುವುದಕ್ಕಾಗಲಿ, ಅವಿಚಾರಕ್ಕೊಳಗುಮಾಡುವುದಕ್ಕಾಗಲಿ ಸಾಕು ; ಇವೆಲ್ಲ ಒಂದೇ ಸ್ಥಳದಲ್ಲಿ ಒಟ್ಟುಗೂಡಿದರೆ ಕೇಳುವದೇನು ?. ವಿಷಯಾರಣ್ಯದೊಳಗೆ ಮನುಷ್ಯನ ಇಂದ್ರಿಯಗಳೆಂಬ ಎರಳೆಗಳು ಸುಖೋಪಭೋಗವೆಂಬ ಮೃಗಜಲಕ್ಕೆಳಸಿ ಹರಿದಾಡುತ್ತವೆ. ಮೊದಲು ತುಚ್ಛವಾಗಿಯೂ ನೀರಸವಾಗಿಯೂ ತೋರುವ ವಿಷಯಗಳೇ ಮುಂದೆ ಯೌವನ ಮದದ ಮಬ್ಬು ತಲೆಗೇರಿದಾಗ ಇಂಪಾಗಿಯೂ ಪ್ರಿಯಕರವಾಗಿಯೂ ತೋರುವುವು. ಸುಶಿಕ್ಷಿತ ಮನುಷ್ಯನು ಸನ್ಮಾರ್ಗದಿಂದಲೇ ನಡೆಯುವನೆಂಬ ನಿಶ್ಚಯವಿಲ್ಲ, ನೀರಿನಿಂದ ಬೆಂಕಿಯು ಆರುವುದು, ಆ ನೀರಿನಿಂದಲೇ ವಡವಾಗ್ನಿಯು ಪ್ರಜ್ವಲಿಸುವುದು. ಗುರೂಪದೇಶಗಳನ್ನು ಕೇಳುವುದೇ ಕಿವಿಗೆ ಭೂಷಣವು. ಅರಸನ ಮಾತಿಗೆ ತಲೆದೂಗುವವರೇ ಬಹಳ ಮಂದಿ." ಎಂದು ಹೇಳಿದನು.

2) ಲಕ್ಷ್ಮಿಯ ಮದವನ್ನು ಕುರಿತು ಶುಕನಾಸನು ಚಂದ್ರಾಪೀಡನಿಗೆ ಹೇಳಿದ್ದೇನು ?

ಚಂದ್ರಾಪೀಡನು, ಶುಕನಾಸನಲ್ಲಿ ಹೋದಾಗ, ಅವನು ಹೀಗೆ ಹೇಳಿ

ದ್ಧಾನೆ : ಲಕ್ಷ್ಮಿಯು ದುರ್ಗುಣಗಳನ್ನು ಕೇಳಿರಿ. ಸಂಗಡಲೋಗಿಂದ ಹುಟ್ಟುವಾಗಲೇ ಈಕೆಗೆ ಒಡಹುಟ್ಟಿದವರ ನೆರಳು ಬಿತ್ತೋ ಏನೋ ಅನ್ನುವ ಹಾಗೆ ಚಂದ್ರನ ಕಲೆಯಿಂದ ವಕ್ರತ್ವವು, ಪಾರಿಜಾತ ವೃಕ್ಷದ ಪಲ್ಲವದಿಂದ ರಾಗವು, ಉಚ್ಚೈಃಶ್ರವದಿಂದ ಚಪಲತೆಯು, ಕಾಲಕೂಟವಿಷ ದಿಂದ ಮೋಹನ ಶಕ್ತಿಯು, ಮದ್ಯದಿಂದ ಮದವು, ಕೌಸ್ತುಭಮಣಿಯಿಂದ ಕಾಠಿನ್ಯವು ಪ್ರಾಪ್ತವಾದವು. ಈಕೆ ಒಬ್ಬರನ್ನೂ ಲೆಕ್ಕಿಸುವುದಿಲ್ಲ ಆ ಲಕ್ಷ್ಮಿಯ ಕುಟಿಲತನವನ್ನು ಎಷ್ಟು ಹೇಳಿದರೂ ತೀರದು.

ಸ್ವಾಮೀ, ಇಂದು ಐಶ್ವರ್ಯದ ಶಿಖರಕ್ಕೆ ಏರಿಸಿದ ಮನುಷ್ಯ ನನ್ನೇ ನಾಳೆಗೆ ತೋರಿಗಿ ಆತನನ್ನು ಮಣ್ಣುಪಾಲು ಮಾಡುತ್ತಾಳೆ. ಇಂಥ ದುಷ್ಟ ಲಕ್ಷ್ಮಿಯ ಗಾಳಿ ಒಮ್ಮೆ ಮೈ ಸೋಂಕಿದರೆ ಸಾಕು ; ಆ ಪುರುಷನು ವಿದ್ವಾಂಸನಿರಲಿ, ಜಾಣನಿರಲಿ, ಪರಾಕ್ರಮಿ ಇರಲಿ, ಕುಲೀನನಿರಲಿ, ಸುಶೀ ಲನಿರಲಿ, ಎಂಥವನಿದ್ದರೂ ಅವನ ಗುಣಗಳನ್ನು ಮಣ್ಣುಪಾಲು ಮಾಡು ತ್ತಾಳೆ. ಅವನ ಗುಣಗಳನ್ನು ಲೋಪಮಾಡಿ ಅವನಿಗೆ ವಿಪರೀತ ಬುದ್ಧಿ ಯನ್ನು ಹುಟ್ಟಿಸಿ, ಅವನನ್ನು ನಿಜವಾದ ಸುಖಕ್ಕೆ ಎರವು ಮಾಡುತ್ತಾಳೆ. ರಾಜಲಕ್ಷ್ಮಿಯ ಅಭಿಷೇಕದಿಂದಲೇ ಅರಸರ ಸೌಜನ್ಯವು ತೊಳೆದುಹೋಗು ವುದು. ತಲೆಯ ಮೇಲೆ ಕಿರೀಟ ಬಂದ ಕೂಡಲೆ ಮುಪ್ಪಿನಿಂದ ತಲೆ ಬೆಳ್ಳ ಗಾಗುವುದನ್ನು ಮರೆಯುತ್ತಾರೆ. ಛತ್ರ–ಹಿಡಿಸಿಕೊಂಡಾಗಲೇ ಅವರಿಗೆ ಪರಲೋಕವು ಮರೆಯಾಗುವುದು. ಚಾಮರದ ಗಾಳಿಗೆ ಅವರ ಸತ್ಯಶೀಲ ತ್ವವು ಹಾರಿಹೋಗುವುದು. ಅವರು ಎಲ್ಲ ದುರ್ಗುಣಗಳಿಗೆ ತವರುಮನೆ ಯಾಗುತ್ತಾರೆ. ಜೂಜಾಡುವುದೇ ವಿನೋದವೆಂದೂ ವ್ಯಭಿಚಾರ ಮಾಡು ವುದೇ ಚತುರತನವೆಂದೂ ಬೇಟೆಯಾಡುವುದೇ ಶರೀರಕ್ಕೆ ಪರಿಶ್ರಮವೆಂದೂ ಮದ್ಯಪಾನವೇ ತಕ್ಕ ವಿಲಾಸವೆಂದೂ ಗುರುಹಿರಿಯರ ಉಪದೇಶವನ್ನು ಅಲ್ಲಗಳೆಯುವುದೇ ಸ್ವಾತಂತ್ರ್ಯವೆಂದೂ ವೇಶ್ಯಾಂಗನೆಯರ ಗಾನ-ನೃತ್ಯ ಗಳಿಗೆ ಲುಬ್ಧರಾಗುವುದೇ ರಸಿಕತನವೆಂದೂ, ಸ್ತುತಿಪಾಠಕರ ಕೊಂಡಾ- ಟವೇ ಕೀರ್ತಿಯೆಂದೂ ಚಂಚಲತನವೇ ಉತ್ಸಾಹವೆಂದೂ ತಾರತಮ್ಯ- ವರಿಯದಿರುವುದೇ ನಿಷ್ಪಕ್ಷಪಾತವೆಂದೂ ಅರಸರು ತಿಳಿದುಕೊಳ್ಳುತ್ತಾರೆ.

5. ಸಂದರ್ಭ ವಾಕ್ಯಗಳು :

[ ಸೂಚನೆ ; ' ಶುಕನಾಸನ ಉಪದೇಶ ' ಪಾಠದಲ್ಲಿ ಪ್ರತಿಯೊಂದು ವಾಕ್ಯವೂ ಅರ್ಥಗರ್ಭಿತವಾಗಿದೆ. ಸಂದರ್ಭಕ್ಕೆ ಯಾವುದೇ ವಾಕ್ಯವನ್ನು ಕೇಳಲು ಸಾಧ್ಯತೆಯುಂಟು. ಈ ಉದ್ದೇಶದಿಂದಲೇ ಸಂಪೂರ್ಣಪಾಠ ವನ್ನು ಶಬ್ದಶಃ ಅನುವಾದಿಸಲಾಗಿದೆ. ಅಧ್ಯಯನ ಮಾಡಿ.]

[ ತಿಳಿಯಿರಿ : ಸಂದರ್ಭವಾಕ್ಯಕ್ಕೆ ಮೊದಲು ಬರೆಯಿರಿ : ಈ ವಾಕ್ಯವನ್ನು, ಬಾಣಭಟ್ಟನ ' ಕಾದಂಬರಿ 'ಯ ' ಶುಕನಾಸಃ ಚಂದ್ರಾಪೀಡಂ ಉಪದಿಶತಿ ' ಎಂಬ ಭಾಗದಿಂದ ಆರಿಸಲಾಗಿದೆ.]

6. ವ್ಯಾಕರಣಾಂಶಗಳು :

1) ಕ್ರಿಯಾರೂಪಗಳು : 1. प्रयतेथा:– ಪ್ರ+ಯತ್ ಧಾತು ವಿನ ಲೋಟ್ ಲಕಾರ, ಮಧ್ಯಮ ಪುರುಷ ಏಕವಚನ.

2. उपशशाम – ಉಪ+ಶಮ್ ಧಾತು, ಲಿಟ್ ಲಕಾರ, ಪ್ರಥಮ ಪುರುಷ, ಏಕವಚನ.

2) ಸಮಾಸಗಳು :

1. **आरूढविनयम्— आरूढः विनयः यं सः, तम्** (ಬಹುವ್ರೀಹಿ ಸಮಾಸ)

2. **अधीतसर्वशास्त्रस्य — अधीतानि सर्वाणि शास्त्राणि येन, तस्य** (ಬಹುವ್ರೀಹಿ)

3. **अपरिणामोपशमः — परिणामे उपशमः यस्य सः परिणामोपशमः, न परिणामोपशमः** (ಬಹುವ್ರೀಹಿ, ನಞ್ ತತ್ಪುರುಷ)

4. **दर्पदाहज्वरोष्मा — दाहश्च असौ ज्वरः च दाहज्वरः, दर्प एव दाहज्वरः, तस्य ऊष्मा**

(ಕರ್ಮಧಾರಯ, ಷಷ್ಠೀ ತತ್ಪುರುಷ)

5. रागमलावलेपः — राग एव मलः, रागमलस्य अवलेपः (ಕರ್ಮಧಾರಯ, ಷಷ್ಠೀತತ್ಪುರುಷ)

6. शास्त्रजलम् — शास्त्रं एव जलम् (ಕರ್ಮಧಾರಯ)

7. अनास्वादितविषयरसस्य — विषयाणां रसः विषयरसः, न आस्वादितः अननुभूतः विषयरसः–विषयरुचिः येन तस्य (ಷಷ್ಠೀತತ್ಪುರುಷ, ನಞ್ ತತ್ಪುರುಷ, ಬಹುವ್ರೀಹಿ)

3. ಏಕಪದಗಳು :

1) चिकीर्षुः — कर्तुम् इच्छुः ।
2) कालुष्यम् — कलुषस्य भावः ।
3) कल्याणाभिनिवेशी — कल्याणे अभिनिवेशः अस्ति इति ।

7. ಕಠಿಣ ಪದಗಳ ಅರ್ಥ :

प्रजागरः – ಜಾಗರಣೆ तन्द्री – ಜಡತೆ नैष्ठुर्यम् – ನಿಷ್ಠುರತೆ अभिजातः– ಸತ್ಕುಲಪ್ರಸೂತ अवधीरयन्तः – ತಿರಸ್ಕರಿಸುವ अलीकम् – ಸುಳ್ಳು

## ಪಾಠ 7 श्रीकृष्णदौत्यम्

### [ ಶ್ರೀಕೃಷ್ಣ ದೌತ್ಯ ]

1. ಅವತರಣಿಕೆ :

'ಶ್ರೀ ಕೃಷ್ಣದೌತ್ಯಮ್' ಈ ಕಥಾಭಾಗವು ರಾಜನೀತಿಯ ಕಥಾಭಾಗ. ಶ್ರೀಕೃಷ್ಣನ ಕಾರ್ಯ ಚಾತುರ್ಯವನ್ನು ಇಲ್ಲಿ ಕಾಣಬಹುದಾಗಿದೆ.

2. ಮುಖ್ಯ ಶಬ್ದಾರ್ಥ :

परेद्युः-ಮರುದಿವಸ वेणवः-ಬಿದಿರುಗಳು संहत्य-ಒಟ್ಟಾಗಿ ಸೇರಿ समीरः-ಗಾಳಿ निरवशेषम्-ಸಂಪೂರ್ಣವಾಗಿ गहना-ದಟ್ಟವಾಗಿಬೆಳೆದು ಒಗ್ಗಟ್ಟಿನಿಂದಿದ್ದ ज्ञातयः-ದಾಯಾದಿಗಳು सुखोच्छेद्याः-ಆಯಾಸವಿಲ್ಲದೆ ನಿರ್ಮೂಲಗೊಳಿಸಲ್ಪಡುವ विपक्षः-ಶತ್ರು त्सरुयम्-ಹಿಡಿಕೆ परशु-ಕೊಡಲಿ दुराधर्षाणि-ಕೀಳಲು ಅಶಕ್ಯವಾದ दुरभिभवत्व-ಆಕ್ರಮಿಸಲು ಸಾಧ್ಯವಿಲ್ಲದ विषीदन्तु-ನಾಶಹೊಂದಲಿ दुर्हृदः-ಶತ್ರುಗಳು आसीदन्तु -ಇರುವಂತಾಗಲಿ त्वदायत्ता-ನಿನ್ನ ಅಧೀನವಾಗಿದೆ.

अभ्यर्थना-ಪ್ರಾರ್ಥನೆ विगृह्णीयात्-ಯುದ್ಧಕ್ಕೆ ತೊಡಗಬೇಕು. सन्दधीत-ಸಂಧಿಮಾಡಿಕೊಳ್ಳಬೇಕು अभियोक्तुम् – ಯುದ್ಧಮಾಡಲು ईहसे-ಅಪೇಕ್ಷಿಸುತ್ತೀಯೆ वेतसवृत्तिः-ಬೆತ್ತದಂತೆ ವರ್ತಿಸುವುದು (ತಲೆ ಬಾಗಿ ನಡೆಯುವುದು) तीर्थीकृत्य-ಹಿರಿಯತನವೆಂದು ಭಾವಿಸಿ शाधि-ಪಾಲಿಸುವವನಾಗು

व्यावृत्य-ತಿರುಗಿಸಿ अवाग्दृष्टिः-ಕೆಳಗೆ ನೋಡುತ್ತ बिभीषिका-ಹೆದರಿಸುವಿಕೆ उपस्थानम् – ಅಂಗಲಾಚಿ ಬೇಡುವುದು सूच्यग्रभेद्याम् -ಸೂಜಿಯ ತುದಿಗೆ ನಿಲುಕುವಷ್ಟು अनात्मज्ञः-ತನ್ನ ಯೋಗ್ಯತೆಯನ್ನು ತಿಳಿಯದಿರುವ मताक्षेण – ಅಕ್ಷವಿದ್ಯೆ (ಜೂಜು) ಯಲ್ಲಿ ಪ್ರಾಜ್ಞನಾದ अपनयः--ನೀತಿಭ್ರಷ್ಟತೆ(ಅನ್ಯಾಯ)ಯು भवान् तुदति--ನೀನು ಚುಚ್ಚಿ ಮಾತನಾಡುತ್ತೀಯೆ प्रतार्य –ವಂಚಿಸಿ प्रत्याहृतम् – ಹಿಂದಕ್ಕೆ ತೆಗೆದು (ಕಿತ್ತು) ಕೊಳ್ಳಲ್ಪಟ್ಟಿದೆ.

नयवादिन् – ನೀತಿಜ್ಞನೆ जतुगृह – ಅರಗಿನ ಮನೆ अयतिष्ट --ಪ್ರಯತ್ನಿಸಿದೆ स्थिरो भव-ದೃಢವಾಗಿ ನಿಲ್ಲು स्मर्तासि-ನನ್ನ ಮಾತನ್ನು ನೆನೆಸಿಕೊಳ್ಳುವೆ.

निगृह्य-ಬಂಧಿಸಿ (ಸೆರೆ ಹಿಡಿದು) प्रदास्यन्ति-ಕೊಟ್ಟುಬಿಡುತ್ತಾರೆ भन्त्स्यामि-ಬಂಧಿಸುವೆನು योजयामास – ನಿಯೋಜಿಸಿದನು उपसंहर-

ಹಿಂದಕ್ಕೆ ತೆಗೆದುಕೊಳ್ಳು न्यवेदयत्- ನಿವೇದಿಸಿದನು.

चोदयामास-ಪ್ರಚೋದಿಸಿದನು अपहाय-ಬಿಟ್ಟು शाखाचङ्क्रमणम्-ಕೊಂಬೆಯಿಂದ ಕೊಂಬೆಗೆ ಹಾರುವುದು (ನಿಷ್ಠೆಯಿಲ್ಲದ ಸಮಯ ಸಾಧನ ಪ್ರವೃತ್ತಿ) चापलपिशुनम् — ಮನಸ್ಸಿನ ಚಪಲತೆಯನ್ನು ತೋರುವುದು.

वैकर्तन:-ಸೂರ್ಯಪುತ್ರ षष्ठांशहर:-ಆರರಲ್ಲಿ ಒಂದು ಪಾಲನ್ನು ಪಡೆಯುವವನು अशरीरिण्या वाचा-ಅದೃಶ್ಯವಾಣಿಯಿಂದ निस्त्रिंशहृदया-ಕ್ರೂರ ಹೃದಯವುಳ್ಳವಳಾಗಿ आत्मकार्यसाधनैकपरा-ಸ್ವಕಾರ್ಯ ಸಾಧನಾತತ್ಪರಗಳು सैंहेय-ಸಿಂಹಶಿಶು सारमेय-ನಾಯಿ शरव्य-ಬಾಣದ ಗುರಿ व्यपदेश-ಹೇಳಿಕೊಳ್ಳುವಿಕೆ आनृण्य-ಋಣಪರಿಹಾರವು

3. ಕನ್ನಡ ರೂಪಾಂತರ :

1) ಶ್ರೀಕೃಷ್ಣನು ಮರುದಿನ ಸಾತ್ಯಕಿ, ವಿದುರಾದಿಗಳೊಡನೆ ಬಂದು (ಧೃತರಾಷ್ಟ್ರನ) ಸಭೆಯನ್ನು ಅಲಂಕರಿಸಿದನು. ಅಲ್ಲಿಗೆ ಬಂದ ನಾರದಾದಿ ಋಷಿಗಳನ್ನು ಗೌರವಿಸಿದನು. ಎಲ್ಲರ ಎದುರಿನಲ್ಲಿ ಧೃತರಾಷ್ಟ್ರನನ್ನು ಸಂಬೋಧಿಸಿ ಇಂತು ಹೇಳಿದನು :

ಶ್ರೀಕೃಷ್ಣೋಪದೇಶ : ಧೃತರಾಷ್ಟ್ರನಿಗೆ (ಶಾಂತಿ-ಸಂಧಾನ)

"ಭಾರತ ಶ್ರೇಷ್ಠನೆ, ಲೋಕದಲ್ಲಿ ಬಿದುರುಗಳು ಒಟ್ಟಾಗಿದ್ದು ನಾಶ ಮಾಡಲು ಸಾಧ್ಯವಿಲ್ಲದವುಗಳಾಗಿರುತ್ತವೆ. ಆದರೆ ಅವು ತಮ್ಮೊಳಗಿನ ರಂಧ್ರಗಳ ಮೂಲಕ ಒಳಗೆ ಪ್ರವೇಶಿಸಿದ ಗಾಳಿಯಿಂದ ಪರಸ್ಪರ ಘರ್ಷಣೆಗೊಳಗಾಗಿ ಸಮೂಲವಾಗಿ ನಾಶವಾಗುತ್ತವೆ. ಇದೇ ರೀತಿಯಲ್ಲಿ ಒಗ್ಗಟ್ಟಿನಲ್ಲಿರುವ ಬಂಧುಗಳು, ತಮ್ಮೊಳಗಿನ ಅಲ್ಪವಾದ ಛಿದ್ರದಿಂದಾಗಿ ಶತ್ರುಗಳಿಂದ ಸುಲಭವಾಗಿ ನಾಶಹೊಂದುತ್ತಾರೆ.

ಅನ್ಯರು ಈ ಬಂಧುಗಳಲ್ಲಿ ಯಾರಾದರೊಬ್ಬರ ಸಹಾಯವಿಲ್ಲದೆ ನಾಶಮಾಡಲು ಸಾಧ್ಯವಾಗುವುದಿಲ್ಲ. ಮರದ ಕಾವಿಲ್ಲದ (ಹಿಡಿಕೆಯಿಲ್ಲದ)

ಕೊಡಲಿಯಿಂದ ಮರಗಳನ್ನು ಕತ್ತರಿಸಿಹಾಕಲು ಸಾಧ್ಯವಾಗುವುದಿಲ್ಲ. ಒಟ್ಟಾಗಿ ಬೆಳೆದ ಹುಲ್ಲುಕಡ್ಡಿಗಳೂ (ನಿರ್ಬಲವಾದ) ಸಹ ನಾಶಗೊಳಿಸಲಾರದವುಗಳಾಗಿರುತ್ತವೆ. ಮಹಾಸತ್ವಶಾಲಿಗಳಾದ ನಿನ್ನ ಮಕ್ಕಳು ಮತ್ತು ಪಾಂಡವರ ಬಗೆಗೆ ಏನು ಹೇಳಲಿ? ಸಿಂಹ ಮತ್ತು ವನ ಒಂದಕ್ಕೊಂದು ಸೇರಿ ಆಜೇಯುವಾಗಿರುವಂತೆ ಬೃಹತ್ ಅರಣ್ಯದಂತಿರುವ ಮಕ್ಕಳೊಂದಿಗನಾದ ನಿನ್ನ ಹಾಗೂ ಸಿಂಹಪರಾಕ್ರಮಿಗಳಾದ ಪಾಂಡವರ ಸಮ್ಮಿಳನವುಂಟಾಗಲಿ. ನಿನ್ನ ಶತ್ರುಗಳು ನಾಶಹೊಂದಲಿ; ಮಿತ್ರರು ಸುಖ–ಸಂತೋಷದಿಂದ ಒಂದೆಡೆ ಸೇರಿ ಸುಖವಾಗಿರಲಿ; ಈ ರಾಜರೆಲ್ಲರೂ ಸ್ವಸ್ಥಾನದಲ್ಲಿ ಇರುವಂತಾಗಲಿ. ನೀನು ಅನುಗ್ರಹ ತೋರುವವನಾಗು. ಇದನ್ನು ಕೇಳಿಕೊಳ್ಳಲೆಂದೇ ನಿನ್ನಲ್ಲಿಗೆ ಬಂದಿದ್ದೇನೆ. ಹೆಚ್ಚೇನು ಹೇಳುವುದಿದೆ? ಈ ಮಹಾಜನರ ಅಳಿವು–ಉಳಿವುಗಳು ನಿನ್ನ ಅಧೀನವಾಗಿವೆ. ಪ್ರಾಣಭಿಕ್ಷೆಯನ್ನು ಕೊಡು."

ದುರ್ಯೋಧನನನ್ನು ಕುರಿತು ಶ್ರೀಕೃಷ್ಣನ ಹೇಳಿಕೆ :

2) ಅನಂತರದಲ್ಲಿ ನಾರದಾದಿಗಳು ನ್ಯಾಯುವಾದುದನ್ನೇ ಉಪದೇಶ ಮಾಡಿದರು. ಆದರೂ ಉಪದೇಶವನ್ನು ಲೆಕ್ಕಿಸದೆ ಕುಳಿತಿದ್ದ ದುರ್ಯೋಧನನನ್ನು ಕುರಿತು ಧೃತರಾಷ್ಟ್ರನ ಪ್ರಾರ್ಥನೆಯಂತೆ ಶ್ರೀಕೃಷ್ಣನು ಈ ರೀತಿ ಹೇಳಿದನು : "ಕುರುರಾಜ! ಶತ್ರುವಿಗಿಂತ ಅತಿಶಯ ಬಲವುಳ್ಳವನು ಯುದ್ಧಮಾಡುವುದು ಉಚಿತವೆನಿಸುತ್ತದೆ. ನಿರ್ಬಲನಾದವನು ಸಂಧಿ ಮಾಡಿಕೊಳ್ಳುವುದು ನೀತಿಯುತವಾದ ಕಾರ್ಯವೆನಿಸಿದೆ. ಈ ಮೊದಲು ಬಹುಬಾರಿ ಭೀಮಾರ್ಜುನರ ಬಲವನ್ನು ನೋಡಿದ್ದಾಗಿದೆ. ಅಥವಾ ನೀನೇ ಸಾಕ್ಷಿಯಾಗಿರುವಾಗ ಬೇರೆ ನಿದರ್ಶನವೇಕೆ ಬೇಕು? ಕಡಿಮೆ ಶಕ್ತಿ ಸಾಮರ್ಥ್ಯವುಳ್ಳ ನೀನು ಮಹಾಬಲವುಳ್ಳವರೊಂದಿಗೆ ಯುದ್ಧಮಾಡಲು ಬಯಸುವುದೇಕೆ? ದುರ್ಬಲರು, ಬೆತ್ತಗಳು ಬದುಕುವಂತೆ, ಬಾಗಿ ನಡೆಯುವುದೇ ಹಿತಕರವು. ಇದು ಹಿತವೆಂದು ಭಾವಿಸಿ ಪಾಂಡವರಿಗೆ ಐದು ಗ್ರಾಮಗಳನ್ನು ಬಿಟ್ಟುಕೊಟ್ಟು ಸಂಪೂರ್ಣ

ಭೂಮಿಯನ್ನು ಆಳುವವನಾಗು.

ಶ್ರೀಕೃಷ್ಣನಿಗೆ ದುರ್ಯೋಧನನ ಪ್ರತ್ಯುತ್ತರ :

3) ಶ್ರೀಕೃಷ್ಣವಚನವನ್ನು ಕೇಳಿ ದುರ್ಯೋಧನನು ಮುಖವನ್ನು ತಿರುಗಿಸಿಕೊಂಡು ಕೆಳಗೆ ನೋಡುತ್ತ ಇಂತು ನುಡಿದನು : "ಕಂಸನನ್ನು ಕೊಂದ ಕೃಷ್ಣನೇ ! ಈ ರೀತಿ ಏಕೆ ಬೆದರಿಸುತ್ತಿರುವೆ ? ನಾವು ಸಬಲರೋ –ದುರ್ಬಲರೋ ಅದನ್ನು ಕುರಿತು ನೀನು ಚಿಂತಿಸಬೇಕಾಗಿಲ್ಲ. ಕ್ಷತ್ರಿಯನಿಗೆ ಯುದ್ಧದಲ್ಲಿ ವೈರಿಯಿಂದ ಮರಣಹೊಂದುವುದು ಅವನನ್ನು ಅಂಗಲಾಚುವುದಕ್ಕಿಂತಲೂ (ಪ್ರಾರ್ಥಿಸುವುದಕ್ಕಿಂತಲೂ) ಉತ್ತಮವಾದದ್ದು. ಭಾರವನ್ನು ಹೊತ್ತ ಕಲ್ಲಿನ ಕಂಬವು ಮುರಿಯುತ್ತದೆಯೇ ಹೊರತು ಬಾಗುವುದಿಲ್ಲ. ಆದುದರಿಂದ ನಮಗೆ ಮುಂದೇನಾಗುವುದಿದೆಯೋ ಅದು ಆಗಲಿ. ಬದುಕಿರುವ ಪರ್ಯಂತ ದುರ್ಯೋಧನನು ಸೂಜಿಯ ಮೊನೆಗೆ ಅಂಟುವಷ್ಟು ಭೂಮಿಯನ್ನು ಕೊಡಲಾರನು. ಇನ್ನು ಐದು ಗ್ರಾಮಗಳ ಮಾತೇನು ? ತನ್ನನ್ನು ತಾನು ಅರಿತುಕೊಳ್ಳಲಾರದ ಯುಧಿಷ್ಠಿರನು ದ್ಯೂತದಲ್ಲಿ ನಿಪುಣನಾದ ಶಕುನಿಯಿಂದ ಜೂಜಿನಲ್ಲಿ ನಿರ್ಗತಿಕನಾದರೆ, ನೀನು ನನ್ನನ್ನು ಮಾತಿನ ಭಲ್ಲೆಯಿಂದ ಇರಿಯುವಂತಹ ನನ್ನ ಅಪರಾಧವಾದರೂ ಯಾವುದು ? ಇದು ನನ್ನಿಂದಲೇ ನಡೆಸಲ್ಪಟ್ಟಿರುವ ಕೃತ್ಯವೆಂದು ನೀನು ತಿಳಿದರೂ ದೋಷವಿಲ್ಲ. ನನ್ನ ತಂದೆಗೆ ಸೇರಿದ ರಾಜ್ಯವನ್ನು ನಾನಿನ್ನೂ ಚಿಕ್ಕವನಾಗಿದ್ದಾಗ ಬೇರೆಯವರು (ಅನ್ಯರು) ವಂಚಿಸಿ ಅಪಹರಿಸಿದ್ದನ್ನು ನಾನು ಮತ್ತೆ ಕಿತ್ತುಕೊಂಡಂತಾಯಿತು.

ಶ್ರೀಕೃಷ್ಣನ ಪ್ರಶ್ನೆ ಮತ್ತು ಮುನ್ನೆಚ್ಚರಿಕೆ :

4) ದುರ್ಯೋಧನನ ಮಾತುಗಳನ್ನು ಕೇಳಿದ ಶ್ರೀಕೃಷ್ಣನು ವ್ಯಂಗ್ಯವಾಗಿ ದುರ್ಯೋಧನನನ್ನು ಕುರಿತು ದಾರ್ಷ್ಟ್ಯದಿಂದ ಹೇಳಿದನು : "ನೀತಿಜ್ಞನಾದ ದುರ್ಯೋಧನ, ನೀನು ಪಾಂಡವರಿಗೆ ಸ್ವಲ್ಪವೂ ಅಪಕಾರ ಮಾಡಿಲ್ಲವಷ್ಟೆ ? ವಿಷಾನ್ನ, ಅರಗಿನಮನೆ ಮೊದಲಾದವುಗಳಿಂದ ಪಾಂಡವರನ್ನು ಕೊಲ್ಲಲು ಪ್ರಯತ್ನಿಸಿದವರಾರು ? ಪಾಂಡವರು ಸೂಜಿಯ

- Radha. B. V

ಮೊನೆಗೆ ಎಷಕುವಷ್ಟು ಭೂಮಿಗೂ ಪಾಲುಗಾರರಲ್ಲವೆನ್ನುತ್ತಿರುವೆ. ಇದು
ಕೇವಲ ನಿನ್ನ ತಂದೆಗೆ ಮಾತ್ರ ಸೇರಿದ ರಾಜ್ಯವೆಂದು ಭಾವಿಸಬೇಡ, ಸ್ಥಿ
ನಾಗು. ನನ್ನ ಮಾತಿನ ಸತ್ಯಾಂಶವನ್ನು ಮುಂದೆ ಕಾಣುವೆ. ನನ್ನ
ಮಾತುಗಳನ್ನು ಸ್ಮರಿಸಿಕೊಳ್ಳುವೆ."

ಶ್ರೀಕೃಷ್ಣನಿಂದ ವಿಶ್ವರೂಪ ಸಂದರ್ಶನ : ಧೃತರಾಷ್ಟ್ರನ ಪ್ರಾರ್ಥನೆ:

5) ದುಶ್ಶಾಸನನು, ದುರ್ಯೋಧನನನ್ನು ಕುರಿತು "ಪೂಜ್ಯನೆ,
ಇವರೆಲ್ಲರೂ ನಿನ್ನನ್ನು ಬಂಧಿಸಿ ಯುಧಿಷ್ಠಿರನಿಗೆ ಒಪ್ಪಿಸಲಿದ್ದಾರೆ." ಎಂದು
ಪಾಪಾತ್ಮನಾದ ದುರ್ಯೋಧನನು ನಿಟ್ಟುಸಿರುಬಿಟ್ಟು ಮೇಲೆದ್ದುಹೋ
ಕರ್ಣಾದಿಗಳ ಜೊತೆ ಶ್ರೀಕೃಷ್ಣನನ್ನು ಬಂಧಿಸಲು ಯೋಚಿಸಿದನು
ಸಾತ್ಯಕಿಯಿಂದ ಈ ವಿಷಯವನ್ನರಿತ ಶ್ರೀಕೃಷ್ಣ, ಧೃತರಾಷ್ಟ್ರನಿಂದ ಕರೆ
ಲ್ಪಟ್ಟವನಾಗಿ ಮತ್ತೆ ಸಭೆಗೆ ಪ್ರವೇಶಿಸಿದ ದುಷ್ಟ ದುರ್ಯೋಧನನನ್ನು
ಕುರಿತು ಇಂತು ನುಡಿದನು – "ಎಲೈ ಮೂರ್ಖನೆ, ಕೃಷ್ಣನು ಅಸಹಾಯ
ಕನಾಗಿ ಬಂದಿರುವನು ; ಈತನನ್ನು ಸುಲಭವಾಗಿ ಬಂಧಿಸಬಹುದೆಂದು
ತಿಳಿದೆಯಾ ? ನೋಡು ಜಗತ್ತೆಲ್ಲವನ್ನೂ ಇಲ್ಲಿಯೇ ತೋರಿಸುತ್ತೇನೆ."
ಎಂದು ಹೇಳಿದ ಶ್ರೀ ಕೃಷ್ಣನು ವಿಶ್ವರೂಪವನ್ನು ತೋರುತ್ತ ಧೃತರಾಷ್ಟ್ರ
ನಿಗೆ ದಿವ್ಯದೃಷ್ಟಿಯನ್ನು ದಯೆಪಾಲಿಸಿದನು. ಧೃತರಾಷ್ಟ್ರನು ವಿಶ್ವರೂಪ
ದರ್ಶನ ಮಾಡಿದವನಾಗಿ ಈ ರೀತಿ ಹೇಳಿದನು –– "ದೇವ, ನನಗೆ ದಯೆ
ಪಾಲಿಸಿದ ಈ ದೃಷ್ಟಿಯನ್ನು ಹಿಂದಕ್ಕೆ ತೆಗೆದುಕೊ. ನಿನ್ನನ್ನು ನೋಡಿದ
ಈ ದೃಷ್ಟಿಯಿಂದ ಬೇರೆಯವರನ್ನು ನೋಡಲಾರೆ." ಶ್ರೀ ಕೃಷ್ಣನು
ಹಾಗೆಯೇ ಆಗಲೆಂದು ಹೇಳಿ ಆತನ ದೃಷ್ಟಿಯನ್ನೂ ಆ ರೂಪವನ್ನೂ
ಉಪಸಂಹರಿಸಿದನು (ಹಿಂದಕ್ಕೆ ತೆಗೆದುಕೊಂಡನು). ಅವರೆಲ್ಲರಿಗೂ
ಬರುವೆನೆಂದು ಹೇಳಿ ಹೊರಟವನಾಗಿ ಕುಂತಿಯಲ್ಲಿಗೆ ಬಂದನು. ಆಕೆ
ಸಭೆಯಲ್ಲಿ ನಡೆದ ವೃತ್ತಾಂತವನ್ನೆಲ್ಲವನ್ನೂ ನಿವೇದಿಸಿದನು.

6) "ಪರಾಕ್ರಮದಿಂದ ಗಳಿಸಿದ್ದೇ ಕ್ಷತ್ರಿಯನಿಗೆ ಪ್ರಶಸ್ತವಾದದ್ದು.
ಬೇಡುವುದರಿಂದ ಬಂದದ್ದು ಶ್ರೇಷ್ಠವಲ್ಲ. ಆದ್ದರಿಂದ ಯುದ್ಧವನ್ನೇ

ಮಾಡಬೇಕು." ಎಂದು ಕುಂತಿಯು ಹೇಳಿದಳು. 'ಕೃಷ್ಣನು ಹಾಗೆಯೇ ಆಗಲೆಂದು' ಹೇಳಿದವನಾಗಿ ಹೊರಹೊರಟನು. ಕರ್ಣನನ್ನು ಏಕಾಂತ ದಲ್ಲಿ ಕರೆದು, ಅವನಿಗೆ; ಅವನು ಕುಂತಿಯ ಮಗನೆಂದು ನಿಜಸ್ಥಿತಿಯನ್ನು ತಿಳಿಸಿದನು ಮತ್ತು ಪಾಂಡವರ ಪಕ್ಷವನ್ನು ಸೇರಲು ಪ್ರಚೋದಿಸಿದನು. ಕರ್ಣನು —" ಅಚ್ಯುತನೆ, ನನ್ನ ಜನ್ಮ ಸ್ಥಿತಿ ಮೊದಲಾದುವುಗಳು ನೀನು ಹೇಳಿದಂತೆಯೇ ಸತ್ಯ ಇರಬಹುದು. ಈ ರೀತಿಯಿದ್ದರೂ ಪುತ್ರನಿಗೆ ಕಡಿಮೆಯಿಲ್ಲದಂತೆ ಸಂಪೋಷಿಸಿದ ರಾಧೆಯನ್ನೂ, ಆ ಕುಲದಲ್ಲಿ ಬೆಳೆದ ಸಂಬಂಧವಿಲ್ಲದಿದ್ದರೂ ಸಹೋದರನಿಗೆ ಕಡಿಮೆಯಿಲ್ಲವೆಂಬಂತೆ ಸಮಾದರಿಸಿದ ಸುಯೋಧನನನ್ನೂ ಪ್ರಯೋಜನಕ್ಕೆ ಬರುವ ಕಾಲದಲ್ಲಿ ಒಮ್ಮೆಲೇ ಬಿಟ್ಟು ಉಭಯತ್ರರಿಗೂ ಕೃತಘ್ನನಾಗುವುದು ಹೇಗೆ ಸಾಧ್ಯ ! ಶಾಖೆಯನ್ನು ಬದಲಾಯಿಸುವುದು (ಕೊಂಬೆಯಿಂದ ಕೊಂಬೆಗೆ ಹಾರುವುದು)– (ಇದು ಕಪಿಬುದ್ಧಿ–ಚಾಂಚಲ್ಯ ) ಮನಸ್ಸಿನ ಚಂಚಲತೆಯನ್ನು ತೋರಿಸುತ್ತದೆ. ಇನ್ನು ನಿನ್ನ ಆಯಾಸ (ನಿನ್ನ ಉಪದೇಶ ಶ್ರಮ) ಸಾಕು " ಎಂದು ಕೃಷ್ಣನಿಗೆ ಹೇಳಿ ತನ್ನ ಮನೆಗೆ ತೆರಳಿದನು.

Radha B.V.

7) ಪ್ರಾತಃಕಾಲದಲ್ಲಿ ಗಂಗಾತೀರದಲ್ಲಿ ಸೂರ್ಯನನ್ನು ಕುರಿತು ಉಪಾಸನೆಯಲ್ಲಿ ತೊಡಗಿದ್ದ ಕರ್ಣನಿಗೆ, "ಪುತ್ರನೆ, ನೀನು ಸೂರ್ಯದೇವನ ಸುಪುತ್ರನು ; ಆದ್ದರಿಂದ ನೀನು ನಿನ್ನ ಸಹೋದರರಾದ ಯುಧಿಷ್ಠಿರಾದಿ ಗಳ ಸಂಗಡ ಸುಖ–ದುಃಖಗಳಲ್ಲಿ ಆರನೆಯ ಒಂದು ಪಾಲನ್ನು ಸ್ವೀಕರಿಸು ವವನಾಗು" ಎಂದು ಕುಂತಿ ಹೇಳಿದಳು. ಈ ಮಾತನ್ನೇ ಪುನರುಚ್ಚರಿ ಸುತ್ತಿರುವ ಅಶರೀರವಾಣಿಯಿಂದ ಪ್ರಚೋದಿಲ್ಪಟ್ಟವನಾಗಿ ವ್ಯಥೆಗೊಂಡು. ಕರ್ಣನು ಇಂತು ನುಡಿದನು— " ತಾಯಿ ಕುಂತಿ, ಸ್ತ್ರೀಯರು ಸ್ವಭಾವತಃ ಅಪವಿತ್ರರೂ, ಕ್ರೂರ ಹೃದಯವುಳ್ಳವರೂ, ಸ್ವಕಾರ್ಯಸಾಧನಾಸಕ್ತರಾದ ವರೆಂಬುದಕ್ಕೆ ಇದಕ್ಕಿಂತಲೂ ಬೇರೆಯಾದ ನಿದರ್ಶನ ಬೇಕೆ ! ನೀನೇ ಜುಗುಪ್ಸೆ ಹುಟ್ಟಿಸುವಂತಹ ಕೃತ್ಯ ಮಾಡಿ ಸಿಂಹದ ಶಿಶುವಿಗೆ ಶ್ವಾನತ್ವ (ನಾಯಿತನ) ಪ್ರಾಪ್ತವಾಗುವಂತೆ ಮಾಡಿರುವೆ. ಈಗ ನಿನ್ನ ಮಕ್ಕಳ

15

ವಿಪತ್ತನ್ನು ಊಹಿಸಿಕೊಂಡು ನಿದ್ರೆಯಿಂದ ಎಚ್ಚರಗೊಂಡವಳಂತಾಗಿರುವೆ. ಅರ್ಜುನನನ್ನು ಬಿಟ್ಟು ನಿನ್ನ ಬೇರೊಬ್ಬ ಪುತ್ರನನ್ನು ನನ್ನ ಬಾಣವು ಗುರಿಯಾಗಿ ಮಾಡಿಕೊಳ್ಳುವುದಿಲ್ಲ. ಆದ್ದರಿಂದ ನನ್ನಿಂದ ಅರ್ಜುನನು ಅಥವಾ ಅರ್ಜುನನಿಂದ ನಾನು ಕೊಲ್ಲಲ್ಪಟ್ಟರೂ ನಿನಗೆ ಐವರು ಮಕ್ಕಳು ಉಳಿಯುತ್ತಾರೆ. ಈ ಉಪಕಾರವೊಂದೇ ನಾನು ನಿನ್ನ ಗರ್ಭವಾಸ ಮಾಡಿದ್ದೆನು ಎಂದು ಹೇಳಿಕೊಳ್ಳಬಹುದಾದ ಋಣ-ಮುಕ್ತಿ" ಎಂದು ಹೇಳಿ ಕುಂತಿಯನ್ನು ಕಳುಹಿಸಿದನು.

4. ಟಿಪ್ಪಣಿಗಳು :

ಕವಿ–ಕಾವ್ಯಪರಿಚಯ : 1. महाभारतम्

ಮಹತ್ವ : 'महत्वात् भारवत्वात् महाभारतमुच्यते'— ಬೃಹತ್ತು ಮತ್ತು ಮಹತ್ತುಗಳಿಂದ ಮಹಾಭಾರತವು ಮಹಾಭಾರತವೆನಿಸಿದೆ. ಇದು ಭಾರತೀಯ ಸಂಸ್ಕೃತಿಯ ಆಗರ ; 'ಕಾವ್ಯಕ್ಕೆ ಗುರು', ಕಥೆ–ಉಪಕಥೆಗಳ ಸಾಗರ ; ಕವಿಗಳಿಗೆ ಉಪಜೀವ್ಯ ಕಾವ್ಯ––

'सर्वेषां कविमुख्यानां उपजीव्यो भविष्यति ।'

ಆವೃತ್ತಿಗಳು : ಈ ಗ್ರಂಥವು ಮೂರು ಆವೃತ್ತಿಗಳಲ್ಲಿವೆ :

1) 'ಜಯ' (ವ್ಯಾಸರು ವೈಶಂಪಾಯನನಿಗೆ).
2) 'ಭಾರತ' (ವೈಶಂಪಾಯನ ಜನಮೇಜಯನಿಗೆ)
3) 'ಮಹಾಭಾರತ' (ಸೂತ ಉಗ್ರಶ್ರವಸ್ಸನು ನೈಮಿಶಾರಣ್ಯದ ಋಷಿಗಳಿಗೆ ಹೇಳಲಾದುದು).

ಒಟ್ಟಿನಲ್ಲಿ ಭಾರತವು 'ಶತಸಾಹಸ್ರೀ ಸಂಹಿತೆ' ಲಕ್ಷ ಶ್ಲೋಕಗಳುಳ್ಳ ಗ್ರಂಥ.

ಕಾಲ : 'ಪಂಚಮವೇದ' ವೆನಿಸಿದ ಈ ಮಹಾಭಾರತದ ಕಾಲ, ಕ್ರಿಸ್ತಪೂರ್ವ ನಾಲ್ಕು–ಐದನೆಯ ಶತಮಾನವೆಂದು ವಿದ್ವಾಂಸರ ಅಭಿಮತ 'ಭಗವದ್ಗೀತೆ' ಇದರ ಸಾರಸರ್ವಸ್ವ. ಇದು ಕೌರವ–ಪಾಂಡವರ

ಯುದ್ಧದ ಕಥೆ ಮಾತ್ರವಾಗಿರದೆ ಕಾವ್ಯರಸ, ಶಾಸ್ತ್ರತತ್ವ, ಲೋಕನೀತಿ, ಧರ್ಮ ನೀತಿಗಳನ್ನು ಬೋಧಿಸುವ ಅಧ್ಯಾತ್ಮ ಗ್ರಂಥವಾಗಿದೆ.

ವ್ಯಾಸಪರಿಚಯು : 'भारतं चेक्षुखण्डं च चन्द्रं चाप्याभिवर्णय प्रतिपर्व सारोदयम्' (ಚಂದ್ರಮನಿಗೆ ಪ್ರತಿ ಪರ್ವ ಕಾಲದಲ್ಲೂ ನೂತನ ಕಳೆಯಿರುವಂತೆ, ಕಬ್ಬಿನ ಪ್ರತಿಗಿಣ್ಣಿಗೆ ಒಂದು ನವ್ಯ ರುಚಿಯಿರುವಂತೆ ಭಾರತದ ಪ್ರತಿ ಪರ್ವದಲ್ಲಿಯೂ ಹೊಸ ರಸೋದಯ ವಿದೆ.) ಇಂತಹ ಶತಸಹಸ, ಶ್ಲೋಕಗಳುಳ್ಳ, ಆದಿ – ಸಭಾ – ವನ – ವಿರಾಟ–ಉದ್ಯೋಗಾದಿ ಹದಿನೆಂಟು ಪರ್ವಗಳುಳ್ಳ ಎರಡು ಸಾವಿರದ ಒಂದು ನೂರ ಒಂಭತ್ತು ಅಧ್ಯಾಯುಗಳುಳ್ಳ ಈ ಮಹಾಭಾರತವನ್ನು ವ್ಯಾಸರು ರಚಿಸಿದ್ದಾರೆ.

ವ್ಯಾಸರು, ಪರಾಶರ – ಯೋಜನಗಂಧಿಯ ಮಕ್ಕಳು. ಇವರು ಋಗ್ವೇದಾದಿ ಚತುರ್ವೇದಗಳನ್ನು ವಿಭಾಗಿಸಿ ವೇದವ್ಯಾಸರೆನಿಸಿದರು. ತಾಯಿಯ ಆಜ್ಞೆಯ ಮೇರೆಗೆ ಪಾಂಡು, ಧೃತರಾಷ್ಟ್ರ, ವಿದುರರ ಜನ್ಮ ಕಾರಣರಾಗಿ ಭರತವಂಶದ ಜನಕರಾದರು. ರಾಮಾಯಣವನ್ನು ರಚಿಸಿದ ವಾಲ್ಮೀಕಿಯಂತೆ ಲೋಕವಿಖ್ಯಾತರಾದರು.

ಪ್ರಸ್ತುತ ಭಾಗ : 'ಮಹಾಭಾರತ'ದ ಕಥೆಯು ಲಕ್ಷ್ಮಣಸೂರಿ ಎಂಬ ಲೇಖಕ ಮಹಾಶಯರಿಂದ ಈ ಶತಕದ ಆರಂಭದಲ್ಲಿ ಸರಳಸಂಸ್ಕೃತ ಗದ್ಯದಲ್ಲಿ ರಚಿಸಿ ಪ್ರಕಟಿಸಲ್ಪಟ್ಟಿದೆ. 'ಭಾರತ ಸಂಗ್ರಹ' ಎಂಬ ಈ ಗ್ರಂಥದಿಂದ ಪ್ರಸ್ತುತ ಗದ್ಯಭಾಗ 'श्रीकृष्णदौत्यम्' ಎಂಬುದನ್ನು ಆರಿಸ ಲಾಗಿದೆ. ಇದು ರಾಜನೀತಿಯ ಕಥೆ.

## 2. ಕ) 'श्रीकृष्णदौत्यम्'— ಹೆಸರಿನ ಔಚಿತ್ಯ :

ಖ) ಕೃಷ್ಣೋಪದೇಶ : ಗ) ಶ್ರೀಕೃಷ್ಣನ ವ್ಯಕ್ತಿತ್ವ :

ಮಹಾಕವಿ ಕುಮಾರವ್ಯಾಸನ ಮಾತುಗಳಲ್ಲಿ 'ಮಹಾಭಾರತವು' ಅರಸುಗಳಿಗಿದು ವೀರ, ಮಂತ್ರಿಜನಕ್ಕೆ ಬುದ್ಧಿಗುಣ, ಕಾವ್ಯಕ್ಕೆ ಗುರು

ಹಾಗೂ ವಿದ್ಯಾಪರಿಣತರಲಂಕಾರವೆನಿಸಿದೆ. ಇದು ಮುಖ್ಯವಾಗಿ ಕೃಷ್ಣನ ಕಥೆಯಾಗಿದೆ. ಇಲ್ಲಿಯು ಶ್ರೀಕೃಷ್ಣ ಪಾಂಡವರಿಗೆ ಮಿತ್ರ; ರಾಜನೀತಿಯ ಉಪದೇಶಕ ; ಆಧ್ಯಾತ್ಮ ತತ್ವಗಳ ಬೋಧಕ ; ಮೇಲಾಗಿ 'ದೇವರದೇವ' ಭಗವಂತನಾಗಿದ್ದಾನೆ.

ಶ್ರೀಕೃಷ್ಣನು ನಿರ್ವಹಿಸಿದ ಅನೇಕ ಪಾತ್ರಗಳಲ್ಲೊಂದಾದ ದೌತ್ಯ ಕಾರ್ಯ ಅತಿ ಮುಖ್ಯವಾದುದು. ಆದ್ದರಿಂದ 'ಭಾರತೇ ಸಾರಮುದ್ಯೋಗಃ' ಎನ್ನಲಾಗಿರಬೇಕು.

ಲಕ್ಷ್ಮಣಸೂರಿಯವರ 'ಭಾರತ ಸಂಗ್ರಹ'ದ 'ಶ್ರೀಕೃಷ್ಣಸಂದೇಶ' ಭಾಗದಲ್ಲಿ ಪಾಂಡವರ ಸಜ್ಜನಿಕೆ, ದುರ್ಯೋಧನನ ಹಠಮಾರಿತನ, ಶ್ರೀಕೃಷ್ಣನ ಚಾತುರ್ಯ ಮನಮೋಹಕವಾಗಿ ಮೂಡಿಬಂದಿದೆ.

ಶ್ರೀಕೃಷ್ಣಬೋಧೆ ಸಂಕ್ಷಿಪ್ತವಾಗಿ ಈ ಮುಂದಿನಂತಿದೆ :

ಒಗ್ಗಟ್ಟಿನಲ್ಲಿ ಬಲವಿದೆ (ಧೃತರಾಷ್ಟ್ರನನ್ನು ಕುರಿತು) :

—"ಒಟ್ಟಿಗೆ ಬೆಳೆದಿದ್ದು ನಾಶಮಾಡಲಶಕ್ಯವಾಗಿದ್ದ ಬಿದಿರು ಮೆಳೆಗಳು, ಅವುಗಳ ರಂಧ್ರದ ಮೂಲಕ ತೂರಿಬಂದ ಗಾಳಿಯ ಮೂಲಕ ಘರ್ಷಣೆಗೆ ಸಿಕ್ಕಿ ನಾಶವಾದವು. ಇದೇ ರೀತಿ ಅಲ್ಪವಾದ ಛಿದ್ರದಿಂದ ಬಂಧುನಾಶ ಸಂಭವಿಸುತ್ತದೆ. ಮರದ ಕಾಪಿನಿಂದ ಕೂಡಿದ ಕೊಡಲಿಯಿಂದ ಮರವನ್ನು ಕಡಿದುಹಾಕಲಾಗುವಂತೆ ಬಂಧುಜನರ ಸ್ವಾರ್ಥ ಸಹಾಯದಿಂದಲೇ ಬಂಧುನಾಶ ಸಂಭವಿಸುತ್ತದೆ.

ಒಟ್ಟಾಗಿ ಬೆಳೆದಿರುವ ಹುಲ್ಲುಕಡ್ಡಿಗಳನ್ನೂ ಕೀಳಲು ಸಾಧ್ಯವಾಗುವುದಿಲ್ಲ. ಸಿಂಹ ಮತ್ತು ವನಗಳು ಪರಸ್ಪರ ಸಮ್ಮಿಳಿತವಾಗಿ ಅಜೇಯವೆನಿಸಿಕೊಳ್ಳುವಂತೆ ದೊಡ್ಡ ಕಾಡಿನಂತಿರುವ ಮಕ್ಕಳೊಂದಿಗನಾದ ನಿನ್ನ ಹಾಗೂ ಸಿಂಹಪರಾಕ್ರಮಿಗಳಾದ ಪಾಂಡವರ ಸಮ್ಮಿಳಿತದಿಂದ ನೀವು ಅಜೇಯರಾಗುವಿರಿ. ನಿಮಗೆ ಶತ್ರುಗಳು ಉಳಿಯಲಾರರು. ನೀವು ಸುಖಿಸುವಿರಿ. ಪ್ರಾಣಭಿಕ್ಷೆ ನೀಡು."

ಸುಕ್ಷೇಮಕ್ಕಾಗಿ ಪ್ರಯತ್ನ (ದುರ್ಯೋಧನನನ್ನು ಕುರಿತು) :

--"ಶತ್ರುಬಲಕ್ಕಿಂತ ಮಿಗಿಲಾದ ಬಲವುಳ್ಳವನು ಯುದ್ಧಕ್ಕೆ ಪ್ರಯತ್ನಿಸುವುದುಚಿತ. ಪಾಂಡವರು ಅಪ್ರತಿಮ ಸಾಹಸಿಗಳೆಂಬಂಶವನ್ನು ನೀನರಿತಿರುವೆ. ದುರ್ಬಲರು ಬಾಗಿ ನಡೆಯುವುದು ಮೇಲು. ಪಾಂಡವರಿಗೆ ಐದು ಗ್ರಾಮ ದಾನಮಾಡಿ ಅವರ ಸ್ನೇಹವನ್ನು ಸಂಪಾದಿಸು." ಕೃಷ್ಣನು ದುರ್ಯೋಧನನಿಗೆ ಪಾಂಡವರ ಬಲವನ್ನು ವಿವರಿಸಿದನು.

ಭೇದೋಪಾಯ ವಿಧಿ :

ಶ್ರೀಕೃಷ್ಣನು ಕರ್ಣನನ್ನು ಕುರಿತು 'ಎಲನೆ ಪಡೆದಾ ಐದು ಮಂತ್ರಗಳಲಿ ಮೊದಲಿಗ ನೀನು' ಎಂದ; 'ನೀನು ಪಾಂಡವ ಪಕ್ಷಕ್ಕೆ ಬಂದುದಾದರೆ ಕದನವಿತ್ತಂಡಕ್ಕೆ ಎಡೆಯಿಲ್ಲ' ಎಂದನು. ಕರ್ಣ ಚಂಚಲನಾಗಿ 'ಕೃತಘ್ನ'ನಾಗಲು ಒಪ್ಪಲಿಲ್ಲ.



ಕುಂತಿಯ ಕೃತ್ಯ :

ಗಂಗಾತೀರಕ್ಕೆ ಕುಂತಿಯನ್ನು ಕಳುಹಿಸಿ ಆಕೆಯು 'ಪಾಂಡವರ ಪ್ರಾಣಭಿಕ್ಷೆ' ಯನ್ನು ಬೇಡುವಂತೆ ಕೃಷ್ಣ ಕಾರ್ಯಮಾಡಿ ಸಫಲನಾದ. ದುರ್ಯೋಧನನು ಶ್ರೀಕೃಷ್ಣನನ್ನು ಬಂಧಿಸಲೆತ್ನಿಸಿದಾಗ ಶ್ರೀಕೃಷ್ಣ ವಿಶ್ವ-ರೂಪದರ್ಶನ ತೋರಿ ತನ್ನ ಮಹತ್ವವನ್ನು ಮೆರೆದನು.

ಇಂತು ಕೃಷ್ಣ ಬಹು ಚಾತುರ್ಯದಿಂದ ದೌತ್ಯ ಕಾರ್ಯವನ್ನು ಮಾಡಿದ. 'ಮಮ ಜೀವಾಃ ಪಾಂಡವಾಃ' 'ಭಂಟರಾವ್ ಭಕ್ತರಿಗೆ' ಎಂದು ಹೇಳಿದ ಮಾತುಗಳನ್ನು ಉಳಿಸಿಕೊಂಡ. ಈ ಸಾಫಲ್ಯದ ದೆಸೆಯಿಂದಲೇ 'ಶ್ರೀಕೃಷ್ಣ ದೌತ್ಯವು' ಎಂಬ ಹೆಸರು ಈ ಭಾಗಕ್ಕೆ ಉಚಿತವಾಗಿಯೇ ಇದೆ.

ಇಲ್ಲಿಯ ಶ್ರೀಕೃಷ್ಣ ಉತ್ತಮ ವಾಗ್ಮಿ; ರಾಜನೀತಿ ಪಂಡಿತ; ಕಾರ್ಯಕುಶಲಿ; ವ್ಯವಹಾರಚತುರ ಹಾಗೂ ಪಾಂಡವಪಕ್ಷಪಾತಿಯಾಗಿ ಚಿತ್ರಿತನಾಗಿದ್ದಾನೆ.

### 3. 'ಕೃಷ್ಣದೌತ್ಯಪಲ್ಲಿ' ಬರುವ ದುರ್ಯೋಧನನ ವ್ಯಕ್ತಿತ್ವ :

ಮಹಾಕವಿ ಕುಮಾರವ್ಯಾಸನ ಮಾತುಗಳಲ್ಲಿ 'ಮಹಾಭಾರತವು' 'ಅರಸುಗಳಿಗಿದು ವೀರ'; 'ಮಂತ್ರೀಜನಕೆ ಬುದ್ಧಿಗುಣ' 'ಕಾವ್ಯಕೆ ಗುರು' ಹಾಗೂ 'ವಿದ್ಯಾಪರಿಣತರಲಂಕಾರ' ವೆನಿಸಿದೆ.

ಈ ಮಹಾಭಾರತದಲ್ಲಿ ಮುಖ್ಯವಾದ ಮೂರು ಪಾತ್ರಗಳನ್ನು ಗಮನಿಸಬಹುದಾಗಿದೆ. ಒಬ್ಬ ಛಲದಂಕಮಲ್ಲ ಸುಯೋಧನ; ಇನ್ನೊಬ್ಬ ಚಾಗದಲ್ಲಿ ಹೆಸರಾಂತ ಕರ್ಣ; ಮತ್ತೊಬ್ಬ ಪಾಂಡವಮಿತ್ರನೂ, ರಾಜನೀತಿಯ ಉಪದೇಶಕನೂ, ಅಧ್ಯಾತ್ಮ ತತ್ವ ಬೋಧಕನೂ, ದೇವರದೇವನೂ ಆದ ಶ್ರೀಕೃಷ್ಣ. ಇಲ್ಲಿ ಮೂವರ ವ್ಯಕ್ತಿತ್ವವೂ ಮನಮೆಚ್ಚುವಂತಹುದೇ ಆಗಿದೆ:

ಶ್ರೀಕೃಷ್ಣ, ಮಹಾರಾಜನಾದ ಧೃತರಾಷ್ಟ್ರನನ್ನು ಕುರಿತು --

**'यथा सिंहवनयोगे मिथः दुरभिभवत्वं भवति, एवं महारण्यस्थानीयस्य सुपुत्रस्य तव सिंहस्थानीयैः पाण्डवैर्योगोऽस्तु ।'** ಎಂದು ಒಗ್ಗಟ್ಟಿನ ಮಹತ್ವವನ್ನು ಬೋಧಿಸಿದನು. ಅನಂತರ ದುರ್ಯೋಧನನನ್ನು ಕುರಿತು --

**'रिपोरतिरिच्य मानबलः विगृह्णीयात् । विपरीतस्तु सन्दधीतेति हि नीतिसारः । बहुशो दृष्टपूर्वं हि भीमार्जुनयोः बलम्'** ಎಂದು ಭಯಪಡಿಸಿದನು.

ಪ್ರತ್ಯುತ್ತರವಾಗಿ ದುರ್ಯೋಧನನು -- 'ಎಲೈ ಕಂಸಾರಿಯೇ! ಕ್ಷತ್ರಿಯನಿಗೆ ಯುದ್ಧದಲ್ಲಿ ಶತ್ರುವಿನಿಂದ ಸಾಯುವುದು ಅವನನ್ನು ಅಂಗಲಾಚುವುದಕ್ಕಿಂತಲೂ ಶ್ರೇಷ್ಠವಾದದ್ದು. ಭಾರವನ್ನು ಹೊತ್ತ ಕಲ್ಲಿನ ಕಂಬವು ಮುರಿಯುತ್ತದೆಯೇ ಹೊರತು ಬಾಗುವುದಿಲ್ಲ. ಬದುಕಿರುವವರೆಗೆ ಈ ದುರ್ಯೋಧನನು ಪಾಂಡವರಿಗೆ ಸೂಜಿಯ ಮೊನೆಯಷ್ಟು ಭೂಮಿಯನ್ನೂ ಕೊಡುವುದಿಲ್ಲವೆಂದು ತಿಳಿ" ಎಂದು ಸ್ಪಷ್ಟವಾಗಿ ಹೇಳಿದ.

ಈ ಮಾತುಗಳಿಂದ ದುರ್ಯೋಧನನಿಗೆ ಪಾಂಡವರ ವಿಷಯದಲ್ಲಿರುವ ದ್ವೇಷ, ಆತನ ದೃಢ ನಿಶ್ಚಯ, ಛಲ ಹಾಗೂ 'ತಾನು ಬಲಾಢ್ಯನೇ ಹೊರತು ಹೇಡಿಯಲ್ಲ' ಎಂಬ ಅಹಂಕಾರ ಅಭಿವ್ಯಕ್ತವಾಗಿದೆ. ದುರ್ಯೋಧನ. ಸುಲಭವಾಗಿ ಪಾಂಡವರ ಮಿತ್ರನಾದ ಕೃಷ್ಣನಿಗೆ ಸಗ್ಗುಪವನಾಗಿರಲಿಲ್ಲ.

'ಮೂರ್ಖಸ್ಯ ನಾಸ್ತ್ಯೌಷಧಮ್' ಎಂಬಂತೆ ದುರ್ಯೋಧನ ಶ್ರೀಕೃಷ್ಣನ ಸಲಹೆಯನ್ನು ಒಪ್ಪದೆ ತನ್ನ ವಂಶದ ಸರ್ವನಾಶಕ್ಕೆ ಕಾರಣನಾದನು.

4. ಕರ್ಣನ ವ್ಯಕ್ತಿತ್ವ :

ಕರ್ಣ ಕುಂತೀ ಸಮಾಗಮ : ಕುಂತಿಗೆ ಕರ್ಣನ ಉತ್ತರ :

ಮಹಾಕವಿ ...................................... ಆಗಿವೆ.

[ಸೂಚನೆ : ದುರ್ಯೋಧನನ ವ್ಯಕ್ತಿತ್ವದ ಆರಂಭದ ಭಾಗ ಬರೆಯಿರಿ. ]

ಕರ್ಣ, ಕೃಷ್ಣನೊಂದಿಗೆ :

ಪಾಂಡವ ಪಕ್ಷಪಾತಿಯಾದ ಶ್ರೀಕೃಷ್ಣನು ದುರ್ಯೋಧನಾದಿಗಳ ದಮನಕಾರ್ಯಕ್ಕಾಗಿ ಮನಸ್ಸುಮಾಡಿ, ದೌತ್ಯಕಾರ್ಯ ಮಾಡಿ ಹಿಂದಿರುಗುವಾಗ ಕರ್ಣನನ್ನು ತನ್ನ ಸಂಗಡ ಕರೆದೊಯ್ದು ಈ ರೀತಿ ಉಪದೇಶಿಸಿದನು "ಕರ್ಣ ! ನೀನು ಸೂರ್ಯವಂಶ ಲಲಾಮ; ಲಲನೆ (ಕುಂತಿ) ಪಡೆದ ಐದು ಮಂತ್ರಗಳಲ್ಲಿ ಮೊದಲಿಗ ನೀನು ; ನೀನು ಪಾಂಡವಪಕ್ಷಕ್ಕೆ ಬಂದುದಾದರೆ 'ಕದನವಿತ್ತಂಡಕ್ಕೆ ಎಡೆಯಿಲ್ಲ'; 'ಸುಯೋಧನನ ಬಾಯ್ದಂಬುಲಕೆ ಕೈಯಾನುವರೆ !' ಮುಂತಾಗಿ ಬೋಧಿಸಿದನು.

ಕರ್ಣ ಇಂತು ನುಡಿದನು–– "ಕೃಷ್ಣ, ಕರ್ಣ ಕೃತಜ್ಞನು; ಕೃತಘ್ನನಾಗಲಾರನು. ನೀನು ಹೇಳಿದ್ದೆಲ್ಲ ಸರಿಯಿರಬಹುದು. ಹೊಟ್ಟೆಯಲ್ಲಿ ಹುಟ್ಟಿದ ಮಗುವಿಗಿಂತಲೂ ಅತಿಶಯವಾಗಿ ಲಾಲಿಸಿ ಪಾಲಿಸಿದ ರಾಧೆಗೆ ಹೇಗೆ ಮೋಸ ಮಾಡಲಿ! ಸಹೋದರನಿಗಿಂತ ಅತಿಶಯವಾಗಿ ಸಂತಸವಿತ್ತು ಸಲಹಿದ ಸುಯೋಧನನಿಗೆ ಹೇಗೆ ದ್ರೋಹಮಾಡಲಿ ! ನಾನು ಕೃತಘ್ನನಾಗ

ಲಾರೆ. 'ನಿನ್ನವರ ನೀ ನಿಲಿಸಿಕೊಳ್ಳು' ಎಂದನು."

ಕುಂತಿಯು ಎದುರಿಸಲ್ಲಿ :

ಕಾರ್ಯಚತುರನಾದ ಶ್ರೀಕೃಷ್ಣನಿಂದ ಪ್ರೇರಿತಳಾದ ಕುಂತಿ ಕರ್ಣನನ್ನು ಸಮಿಾಪಿಸಿ — 'ನಿನ್ನ ಸಹೋದರರ ತಲೆಗಾಯಬೇಕೆಂದು' ಬೇಡಿದಳು. ಕರ್ಣ ಈ ರೀತಿ ಹೇಳಿದ : "ತಾಯಿ, ಸ್ತ್ರೀಯರು ಸ್ವತಃ ಅಪವಿತ್ರರು, ಕ್ರೂರಹೃದಯವುಳ್ಳವರು, ಸ್ವಕಾರ್ಯ ಸಾಧಕರು. ಈ ಮಾತಿಗೆ ನೀನೇ ಸಾಕ್ಷಿ ಸಿಂಹಶಿಶುವಿಗೆ ನಾಯತನವನ್ನು ನೀನಿತ್ತಿರುವೆ. ನನ್ನ ದುಃಸ್ಥಿತಿಗೆ ನೀನು ಕಾರಣಳಾಗಿರುವೆ. ಈಗ ನಿನ್ನ ಮಕ್ಕಳ ಹಿತರಕ್ಷಣೆಗಾಗಿ ನನ್ನಲ್ಲಿ ಬಂದಿರುವೆ. ನಾನು ಅರ್ಜುನನಿಂದ ಹತನಾದರೂ ಸರಿ ಅಥವಾ ಅವನೇ ನನ್ನಿಂದ ಮೃತನಾದರೂ ಸರಿ ನಿನಗೆ ಐವರು ಮಕ್ಕಳು ಉಳಿದಂತಾಗುತ್ತಾರೆ. ನಿನ್ನ ಗರ್ಭದಲ್ಲಿ ಹುಟ್ಟಿದ ಋಣವನ್ನು ಈ ರೀತಿ ನಾನು ತೀರಿಸುತ್ತೇನೆ."

ಕರ್ಣನ ಈ ಮೇಲಿನ ಎರಡೂ ಸಂದರ್ಭದ ಮಾತುಗಳಲ್ಲಿ ಈತನ ಕೃತಜ್ಞತಾ ಭಾವ, ಕರ್ತವ್ಯನಿಷ್ಠೆ, ನಿಷ್ಕಲ್ಮಷ ಪ್ರೇಮ, ವಚನಪಾಲನೆಯ ಆತುರತೆ ಎಲ್ಲ ವ್ಯಕ್ತವಾಗಿವೆ. ಕರ್ಣ ನಿಜಕ್ಕೂ ಮಹಾಭಾರತದ ಮಹಾಪುರುಷನೇ ಸರಿ ಎಂದು ಹೇಳಬಹುದಾಗಿದೆ.

5. ಸಂದರ್ಭ ವಾಕ್ಯಗಳು : 'श्रीकृष्णकर्णीयम्'

1. 1) वेणवो लोके .... भस्मी भवन्ति । 2) नहि त्वसख्येण .... सम्पद्यते । 3) संहतानि .... दृश्यन्ते । 4) यथा सिंहवन .... भवति । 5) विषीदन्तु .... 6) निषीदन्तु .... 7) आसीदन्तु .... स्वमावासम् 8) एतदेव .... स्मि । 9) त्वदायत्ता .... मृतिर्वा । 10) देहि प्राणभिक्षाम् ।

Radha.B.V



ಕವಿಕಾವ್ಯ : ಈ ವಾಕ್ಯವನ್ನು ಮಹರ್ಷಿ ವ್ಯಾಸವಿರಚಿತವಾದ ಮಹಾಭಾರತದ ಆಧಾರದ ಮೇಲೆ ಶ್ರೀ ಲಕ್ಷ್ಮಣಸೂರಿಯವರಿಂದ ವಿರಚಿತ ವಾದ ಸಂಸ್ಕೃತಗದ್ಯ 'ಶ್ರೀಕೃಷ್ಣಸಂದೇಶಮ್' ಎಂಬ ಭಾಗದಿಂದ ಆರಿಸಲಾಗಿದೆ. (ಈ ಭಾಗವನ್ನು ಸಂದರ್ಭ ಬರೆಯುವಾಗ ಮೊದಲು ಬರೆಯಬೇಕು)

ಸಂದರ್ಭ : 'भारते सारम्भयोग:' ಎಂದು ವಿದ್ವಾಂಸರು ಹೇಳಿದ್ದಾರೆ. ಪಾಂಡವರ ಪಕ್ಷಪಾತಿಯೆನಿಸಿ ಸಂಧಾನಾಪೇಕ್ಷಿಯಾದ ಶ್ರೀಕೃಷ್ಣ ಧೃತರಾಷ್ಟ್ರನಿಗೆ ಒಗ್ಗಟ್ಟಿನ ಬಲದ ಬಗೆಗೆ ಬೋಧಿಸಿದ್ದಾನೆ. 'सङ्घे शक्तिः कलौ युगे' ಎಂಬುದು ದ್ವಾಪರಯುಗದಲ್ಲೂ ಸಾರ್ಥಕವೆನಿಸಿರಬಹುದೆಂದು ಭಾವಿಸಬಹುದಾಗಿದೆ.

ಅರ್ಥ ವಿವರಣೆ : ಶ್ರೀಕೃಷ್ಣನು ಧೃತರಾಷ್ಟ್ರನಿಗೆ ಒಗ್ಗಟ್ಟಿನ ಮಹತ್ತ್ವವನ್ನು ಬೋಧಿಸಲು ಮೂರು ಮಹತ್ತ್ವಪೂರ್ಣವಾದ ಹಾಗೂ ಅರ್ಥಗರ್ಭಿತವಾದ ಉದಾಹರಣೆಗಳನ್ನು ಕೊಟ್ಟಿದ್ದಾನೆ — 1) ಬಿದಿರು 2) ಹುಲ್ಲು ಮತ್ತು 3) ಸಿಂಹ-ವನ ಸಂಯೋಗ. ಈ ಮೂರು ವಸ್ತುಗಳು ಒಟ್ಟಾಗಿದ್ದಲ್ಲಿ ಅಜೇಯವಾದವುಗಳೆನಿಸುತ್ತವೆ ; ಇವುಗಳಲ್ಲಿ ಪರಸ್ಪರ ಒಡಕು ತೋರಿದಲ್ಲಿ ಇವು ಸಮೂಲವಾಗಿ ಸರ್ವನಾಶವನ್ನು ಹೊಂದುತ್ತವೆ. ಬಿದಿರು ತನ್ನಲ್ಲಿರುವ ಛಿದ್ರದಿಂದ ಗಾಳಿತೂರಲು ಅವಕಾಶ ಮಾಡಿಕೊಂಡು ನಾಶವಾಗುತ್ತವೆ ; ಒಟ್ಟಾಗಿ ಬೆಳೆದ ಹುಲ್ಲು ಬೇರೆ ಬೇರೆಯಾಗಿಸಿಕೊಂಡು ಹಾಳಾಗುತ್ತವೆ ; ವನದಿಂದ ಸಿಂಹ ಬೇರೆಯಾಗಿದ್ದಲ್ಲಿ, ಸಿಂಹಕ್ಕೆ ನಾಶ ತಪ್ಪುವುದಿಲ್ಲ. ವೃಕ್ಷಸಮೂಹವನ್ನು ನಾಶಮಾಡಲು ಮರದಕಾವೇ ಕೊಡಲಿಗೆ ಸಹಾಯವಾಗುವಂತೆ ಬಂಧುಸಮೂಹವಾಗಿ ಶತ್ರುಗಳಾಗಿ ಒಟ್ಟು ಕುಂಟುಂಬದ ಸರ್ವನಾಶಕ್ಕೆ ಕಾರಣರಾಗುತ್ತಾರೆ.

ನೂರುಮಂದಿ ಕೌರವರೂ — ಐವರು ಪಾಂಡವರೂ ಒಟ್ಟು ಸೇರಿದಲ್ಲಿ ಕುರುವಂಶ ಸುಕ್ಷೇಮವಾಗಿರುತ್ತದೆ. ಇದರಿಂದಲೇ ನಿನ್ನ ಶತ್ರುಗಳು ನಾಶವಾಗುತ್ತಾರೆ ; ಮಿತ್ರರು ಸುಖಿಸುತ್ತಾರೆ ; ಪ್ರಜೆಗಳು ಕುಶಲಿಗಳೆನಿಸುತ್ತಾರೆ. ನೀನು ಎಲ್ಲರ ಸುಕ್ಷೇಮಕ್ಕಾಗಿ ಪ್ರಾಣಭಿಕ್ಷೆ ನೀಡು.

2. 1) निपोतितविक्ष .... तु । 2) विपरीतस्तु....

नीतिसारः । 3) अथवा किमन्येन .... स्थिते ।
4) एवं अवहीन .... ईहसे । 5) दुर्बलानां .... परायणम्
6) तस्मादेव .... इति ।

ಸಂದರ್ಭ : 'भारते सारमुद्योग:'– ಮಹಾಭಾರತದಲ್ಲಿ ಉದ್ಯೋಗಪರ್ವವು ಬಹು ಪ್ರಾಮುಖ್ಯತೆಯನ್ನು ಪಡೆದಿದೆ. ಪಾಂಡವಪಕ್ಷಪಾತಿಯೆನಿಸಿದ ಶ್ರೀಕೃಷ್ಣನು ಸಂಧಾನಾಪೇಕ್ಷಿಯಾಗಿ ಧೃತರಾಷ್ಟ್ರನಲ್ಲಿಗೆ ಬಂದನು ಮೊದಲು ಧೃತರಾಷ್ಟ್ರನಿಗೆ ಒಗ್ಗಟ್ಟಿನ ಬಲದ ಬಗೆಗೆ ಬೋಧಿಸಿದನು. ಅನಂತರ ದುರ್ಯೋಧನನಿಗೆ ಹಿತವಚನವನ್ನು ನುಡಿದನು —

ಅರ್ಥ ವಿವರಣೆ : 'ಯುದ್ಧಕ್ಕೆ ತೊಡಗುವವನು ತಾನು ಶಕ್ತಿಶಾಲಿಯೆನಿಸಿರಬೇಕು. ಅಶಕ್ತನಾದವನು ಸಂಧಿಗೆತ್ನಿಸಬೇಕು.'— ಇದು ರಾಜನೀತಿಯ ಗುಟ್ಟು. ಪಾಂಡವರು ನಿರ್ಬಲರಲ್ಲ, ಭೀಮಾರ್ಜುನರು ಶಕ್ತಿಯುತರೆಂಬಂಶ ನಿನಗೆ ತಿಳಿದಿದೆ. ನೀನೇ ಅವರ ಶಕ್ತಿಸಂಪನ್ನತೆಯ ಅನುಭವವುಳ್ಳವನಾಗಿದ್ದೀಯೆ. ಶಕ್ತಿಹೀನನಾದ ನೀನು ಬೆತ್ತದಂತೆ ಬಾಗಿ ನಡೆಯುವುದು ಮೇಲೆಂದು ನಾನು ಭಾವಿಸುತ್ತೇನೆ. ಪಾಂಡವರಿಗೆ ಐದು ಗ್ರಾಮಗಳನ್ನು ಬಿಟ್ಟುಕೊಟ್ಟು ಸಂಪೂರ್ಣ ಭೂಮಿಯನ್ನು ಆಳಿಕೋ.

3. 1) वयं दुर्बला .... स्याम । 2) क्षत्रियस्य संयुगे .... स्थानम् । 3) भाराक्रान्तो हि .... नमेत् ।
4) तस्मादस्माकं .... भवतु । 5) कोऽत्र .... स्तुवति ।
6) अथ त्वं .... न दोषः । 7) मम पित्र्यं .... हृतम् ।

ಸಂದರ್ಭ : (2 ರ ಭಾಗ) +

—'रिपोरतिरिच्य मानबलः विगृह्णीयात् । विपरीतस्तु सन्दधीतेति हि नीतिसारः ।' (ವೈರಿಗಿಂತ ಹೆಚ್ಚಿನ ಬಲವುಳ್ಳವನು ಯುದ್ಧ ಮಾಡಬೇಕು. ಅದಕ್ಕೆ ವಿರುದ್ಧನಾದವನು– ಅಂದರೆ ನಿರ್ಬಲನಾದವನು ಸಂಧಿಮಾಡಿಕೊಳ್ಳುವುದು ಮೇಲು.) ಕೃಷ್ಣನಿಗೆ

ದುರ್ಯೋಧನನು ಮಾರುತ್ತರ ನೀಡುತ್ತಾ ಇಂತೆಂದನು --

ಅರ್ಥ ವಿವರಣೆ : 'ಕೃಷ್ಣ, ನಾವು ದುರ್ಬಲರೋ, ಇಲ್ಲವೆ ಸಬಲರೋ, ಎಂತಾದರೂ ಇರಲಿ. ನೀನು ಚಿಂತಿಸಬೇಕಾಗಿಲ್ಲ. ಕ್ಷತ್ರಿಯನು ಯುದ್ಧದಲ್ಲಿ ಸಾಯುವುದು ಅಂಗಲಾಚುವುದಕ್ಕಿಂತ ಶ್ರೇಷ್ಠವಾದುದು. ಭಾರವನ್ನು ಹೊತ್ತ ಕಲ್ಲಿನ ಕಂಬವು ಮುರಿಯುವುದೇ ಹೊರತು ಬಾಗುವುದಿಲ್ಲ. ಆಗಲಿರುವುದೆಲ್ಲ ಆಗುತ್ತ ಹೋಗಲಿ, ನಾನು ಬದುಕಿರುವವರೆಗೂ ಪಾಂಡವರಿಗೆ ಸೂಜಿಯ ಮೊನೆಯಷ್ಟು ಭೂಮಿಯನ್ನು ಕೊಡಲಾರೆ. ಪಾಂಡವರು ಶಕುನಿಯಿಂದ ಜೂಜಿನಲ್ಲಿ ಸೋತು ಸರ್ವಸ್ವವನ್ನೂ ಕಳೆದು ಕೊಂಡರು. ನಾನೇ ಈ ಕೆಲಸ ಮಾಡಿದ್ದೇನೆಂದು ನೀನು ಭಾವಿಸಿದರೂ ತಪ್ಪಾಗಲಾರದು. ಆದರೆ ನೀನು ನನ್ನನ್ನು ಚುಚ್ಚಿ ಮಾತನಾಡುವುದು ಅರ್ಥವಿಲ್ಲದ್ದೇ ಸರಿ. ನಾವು ಚಿಕ್ಕವರಾಗಿದ್ದಾಗ ನಮ್ಮ ಆಸ್ತಿಯನ್ನು ಕಿತ್ತುಕೊಂಡದ್ದನ್ನು ನಾವು ಮತ್ತೆ ಸಂಪಾದಿಸಿಕೊಂಡಂತಾಗಿದೆ.

4. 1) अयि नयवादिन् .... पाण्डवानाम् । 2) कस्तर्हि .... अयादिष्ट । 3) ननु तवैवेदं ........ ते भागिनः । 4) स्थिरो .... वचनम् ।

ಸಂದರ್ಭ : 'भारते सारमुद्योगः'। ಸಂಧಾನಾಪೇಕ್ಷೆಯಾಗಿ ಬಂದ ಶ್ರೀಕೃಷ್ಣನು ಧೃತರಾಷ್ಟ್ರನಿಗೂ ದುರ್ಯೋಧನನಿಗೂ ಹಿತವಾಕ್ಯಗಳನ್ನಾಡಿದನು. ಸುಯೋಧನನು ಕೃಷ್ಣನನ್ನು ವಿರೋಧಿಸಿ ನುಡಿದಾಗ ಶ್ರೀಕೃಷ್ಣನು ಇಂತು ನುಡಿದನು.

ಅರ್ಥ ವಿವರಣೆ : "ವಿಷಾನ್ನ ನೀಡಿರುವುದೂ, ಅರಗಿನ ಮನೆಯಲ್ಲಿ ನಡೆಸಿದ ಕೃತ್ಯ -- ಈ ಎಲ್ಲವುಗಳ ಮೂಲಕ ಪಾಂಡವರನ್ನು ಕೊಲ್ಲಲು ಪ್ರಯತ್ನಿಸಿದ್ದೂ ಸಹ ನೀನು 'ನಾನು ಅಪರಾಧ ಮಾಡಿಲ್ಲ' ವೆಂದು ನ್ಯಾಯಪರನಂತೆ ನುಡಿಯುತ್ತಿರುವುದು ನ್ಯಾಯವೆ ! ಸೂಜಿಯ ಮೊನೆಯಷ್ಟು ಭೂಮಿ ಪಡೆಯಲು ಪಾಂಡವರು ಅರ್ಹರಲ್ಲವೆನ್ನುವುದು

ಉಚಿತವೆನಿಸದು. ಈ ರಾಜ್ಯವೆಲ್ಲವೂ ನಿಮ್ಮ ತಂದೆಗೇ ಸೇರಿರುವುದಿಲ್ಲ. ಪಾಂಡವರ ತಂದೆ ಪಾಂಡುರಾಜನಿಗೂ ಅರ್ಧರಾಜ್ಯ ಸೇರಿದೆ. ಅದಕ್ಕೆ ಪಾಂಡವರು ಹಕ್ಕುದಾರರು ಎಂಬುದನ್ನು ಮರೆಯಬೇಡ ಎಂದು ಎಚ್ಚರಿಸಿದನು."

5. आर्य एते त्वां .... प्रदास्यन्ति ।

ಸಂದರ್ಭ : 'भारते सारमुद्योगः'। ಸಂಧಾನಾಪೇಕ್ಷಿಯಾಗಿ ಬಂದ ಶ್ರೀಕೃಷ್ಣನು ಧೃತರಾಷ್ಟ್ರನಿಗೂ ದುರ್ಯೋಧನನಿಗೂ ಹಿತನುಡಿಗಳನ್ನು ನುಡಿದು 'ಪಾಂಡವರಿಗೆ ಐದು ಗ್ರಾಮಗಳನ್ನಾದರೂ ದಾನಮಾಡು'ಎಂದನು. ದುರ್ಯೋಧನನು ಶ್ರೀಕೃಷ್ಣನಿಗೆ ' ಸೂಜಿಯ ಮೊನೆಯಷ್ಟು ಭೂಮಿಯನ್ನು ನೀಡಲಾರೆನೆಂದು ' ತಿಳುಹಿಸಿದನು.

ಅರ್ಥ ವಿವರಣೆ : ಈ ಎಲ್ಲ ಸನ್ನಿವೇಶವನ್ನು ನೋಡುತ್ತ ಕುಳಿತಿದ್ದ ದುಶ್ಶಾಸನನು ದುರ್ಯೋಧನನನ್ನು ಕುರಿತು-- ' ಇವರೆಲ್ಲರೂ ಕಪಟಿಗಳು, ತಮ್ಮ ಬುದ್ಧಿಬಲದಿಂದ ನಿನ್ನನ್ನು ಬಂಧಿಸಿ ಪಾಂಡವರಿಗೆ ಸುಲಭವಾಗಿ ಕೈವಶಪಡಿಸಲು ಹವಣಿಸುತ್ತಿದ್ದಾರೆ. ಎಚ್ಚರಿಕೆ ವಹಿಸು. ಇವರ ಉಪದೇಶಗಳಿಗೆ ಮನಸೋಲುವವನಾಗಬೇಡ ' ಎಂದು ಎಚ್ಚರಿಸಿದನು. ಈ ಮಾತನ್ನು ಕೇಳಿದ ದುರ್ಯೋಧನನು ಕೃಷ್ಣನನ್ನು ಬಂಧಿಸಲು ಹವಣಿಸಿದನು.

6. 1) रे मूर्ख ....दर्शयिष्यामि। 2) भगवन्....उपसह्रते ।

ಸಂದರ್ಭ : ( 5 ರ ಭಾಗ ) + ಮತ್ತು ಕರ್ಣಾದಿಗಳೊಂದಿಗೆ ಪರ್ಯಾಲೋಚಿಸಿ ಶ್ರೀಕೃಷ್ಣನನ್ನು ಬಂಧಿಸಲೆತ್ನಿಸಿದನು.

ಅರ್ಥ ವಿವರಣೆ : ಸಾತ್ಯಕಿಯಿಂದ ದುರ್ಯೋಧನನು ತನ್ನನ್ನು ಬಂಧಿಸಲೆತ್ನಿಸುತ್ತಿರುವ ವಿಷಯವನ್ನರಿತ ಶ್ರೀಕೃಷ್ಣನು ದುರ್ಯೋಧನನನ್ನು ಎಚ್ಚರಿಸಿದನು -- ' ಕೃಷ್ಣನು, ಅಸಹಾಯಕನಾಗಿ ಬಂದಿಲ್ಲ. ನನ್ನ ನಿಜಸ್ವರೂಪವನ್ನು ತೋರಿಸುತ್ತೇನೆ. ಸಕಲ ಬ್ರಹ್ಮಾಂಡವೇ ನನ್ನಲ್ಲಡಗಿದೆ.

ಶ್ರೀಕೃಷ್ಣನು ವಿಶ್ವರೂಪವನ್ನು ಪ್ರದರ್ಶಿಸಿದನು. ಧೃತರಾಷ್ಟ್ರನಿಗೆ ದಿವ್ಯದೃಷ್ಟಿಯನ್ನು ಕರುಣಿಸಿದನು. ಧೃತರಾಷ್ಟ್ರನು– 'ನಿನ್ನ ದಿವ್ಯರೂಪ ದರ್ಶನಗೈದ ನನ್ನ ಕಣ್ಣಿನಿಂದ ನನ್ನ ಮಗ ದುರ್ಯೋಧನನ ಪಾಪಕಾರ್ಯ ವನ್ನು ನೋಡಲು ಇಷ್ಟಪಡಲಾರೆ' ಎಂದನು. ಸ್ವಾಮಿಯು ಆತನ ದೃಷ್ಟಿಯನ್ನು ಉಪಸಂಹರಿಸಿದನು. ಮುನ್ನಿನ ರೂಪವನ್ನು ಹೊಂದಿ ಆಸ್ಥಾನದಿಂದ ಹೊರಟನು.

7. विक्रमार्जितमेव .... प्रवर्तन्ते इति ।

ಸಂದರ್ಭ : ಸಂಧಾನಾಪೇಕ್ಷಿಯಾಗಿ ಧೃತರಾಷ್ಟ್ರನ ಆಸ್ಥಾನಕ್ಕೆ ತೆರಳಿದ್ದ ಶ್ರೀಕೃಷ್ಣನು ಕುಂತಿಯ ಬಳಿಗೆ ಹಿಂತಿರುಗಿ ಬಂದು, ತಾನು ಮಾಡಿದ ಉಪದೇಶ, ದುರ್ಯೋಧನನ ಪ್ರತಿಕ್ರಿಯೆ, ದುರ್ಯೋಧನನು ಬಂಧಿಸಲೆತ್ನಿಸಿದ್ದು, ತಾನು ತೋರಿದ ವಿಶ್ವರೂಪವೆಲ್ಲವನ್ನೂ ತಿಳಿಸಿ 'ಶಾಂತಿ ಸಂಧಾನ ಮುಗಿಯಿತೆಂದು' ಹೇಳಿದನು.

ಅರ್ಥ ವಿವರಣೆ : ಕುಂತಿಯು ಶ್ರೀಕೃಷ್ಣನನ್ನು ಕುರಿತು ಹೇಳಿದಳು – "ನನ್ನ ಮಕ್ಕಳು ಶೂರರು ; ಹೇಡಿಗಳಲ್ಲ. ಪರಾಕ್ರಮದಿಂದ ಗಳಿಸಿದ್ದೇ ಕ್ಷತ್ರಿಯನಿಗೆ ಪ್ರಶಸ್ತವಾದುದು. ಬೇಡಿಬಂದದ್ದು ಶೌರ್ಯಕ್ಕೆ ಕುಂದು. ಆದ್ದರಿಂದ ಯುದ್ಧ ನಡೆಯಲಿ." ಶ್ರೀಕೃಷ್ಣನು ತನ್ನ ಒಪ್ಪಿಗೆ ಕೊಟ್ಟನು.

8. 1) अस्तु नाम मम .... भवतु कर्णः ।

2) चापलं शिशुनं .... चङ्क्रमणम् ।

ಸಂದರ್ಭ :

ಶ್ರೀಕೃಷ್ಣನು, ಸಂಧಾನಾಪೇಕ್ಷಿಯಾಗಿ ಧೃತರಾಷ್ಟ್ರನ ಆಸ್ಥಾನಕ್ಕೆ ಬಂದು ತಂದೆಮಕ್ಕಳಿಗೆ ಹಿತವಚನವನ್ನು ನುಡಿದನು. ದುರ್ಯೋಧನನು ಪ್ರತಿವಾದಿಸಿದನು. ಸಂಧಾನ ಮುರಿಯಿತು. ಶ್ರೀಕೃಷ್ಣನು ಭೇದೋ ಪಾಯದಿಂದ ಕರ್ಣನನ್ನು ಪಾಂಡವಪಕ್ಷಕ್ಕೆ ಸೇರಿಸಲು ಹವಣಿಸಿ ಆತನನ್ನು

ಏಕಾಂತದಲ್ಲಿ ಕರೆದು ಆತನ ಜನ್ಮ ವೃತ್ತಾಂತವನ್ನು ಆತನಿಗೆ ತಿಳಿಸಿದನು.

ಅರ್ಥ ವಿವರಣೆ : ಕರ್ಣನು ಕೃತಜ್ಞನೇ ಹೊರತು ಕೃತಘ್ನನಲ್ಲ. ಆದ್ದರಿಂದ ಶ್ರೀಕೃಷ್ಣನನ್ನು ಕುರಿತು ಇಂತು ನುಡಿದನು — "ನೀನು ಹೇಳಿದ ಜನ್ಮ ವೃತ್ತಾಂತವನ್ನು ಅರಿತೆನು. ಆದರೆ ಹೆತ್ತತಾಯಿಗಿಂತ ಅತಿ ಮಮತೆಯಿಂದ ಸಲಹಿದ ರಾಧೆಯನ್ನು ಬಿಟ್ಟು ಬರಲಾರೆನು ; ಪ್ರಾಣ ಸ್ನೇಹಿತನಾದ ದುರ್ಯೋಧನನನ್ನು ಯುದ್ಧ ಸನ್ನಿವೇಶದಲ್ಲಿ ಕೈ ಬಿಡಲಾರೆನು. ನಾನು ಸಮಯಸಾಧಕನಲ್ಲ ; ಚಂಚಲಬುದ್ಧಿಯುಳ್ಳವನು ತಾನಲ್ಲ."

9. 1) भद्र ! वैकर्तनतनयः .... भव इति । 2) अपि सूरि .... अन्वेष्टव्यम् । 3) यत्त्वात्मन एव .... बोधयति । 4) अथवा .... न करिष्यसि । 5) अथो मया .... पञ्चपुत्रास्मि । 6) एतदेव .... न्मयम् इति ।

ಸಂದರ್ಭ : ರಾಜನೀತಿಯ ಚಾಣಾಕ್ಷನೆನಿಸಿದ ಶ್ರೀಕೃಷ್ಣನ ಪ್ರೇರಣೆಯಿಂದ 'ಪಾಂಡವರ ರಕ್ಷಣೆ ಮಾಡೆಂದು' ಪ್ರಾರ್ಥಿಸಲು ಕುಂತಿ ಕರ್ಣನ ಬಳಿಗೆ ಬಂದಿದ್ದಾಳೆ.

**ಅರ್ಥ ವಿವರಣೆ :**

ಲೋಕದಲ್ಲಿ ಬರಲಿರುವ ಆಪತ್ತನ್ನು ಕಂಡು ತನ್ನನ್ನು ಮತ್ತು ತನ್ನವರನ್ನು ರಕ್ಷಿಸಲು ಪ್ರಯತ್ನಿಸುವುದನ್ನು ಕಾಣುತ್ತೇವೆ. ತನ್ನ ಕಷ್ಟ ಪರಂಪರೆಗಳಿಗೆ ಕಾರಣರಾದವರನ್ನು ಅವಕಾಶ ಸಿಕ್ಕಾಗ ಮೂದಲಿಸುವುದನ್ನು ನೋಡುತ್ತೇವೆ. ಕುಂತಿ–ಕರ್ಣ ಸಮಾಗಮದಲ್ಲಿ ಈ ಎರಡೂ ಸನ್ನಿವೇಶಗಳಿವೆ. ಪಾಂಡವರಿಗೆ ಒದಗಿದ ವಿಪತ್ತನ್ನು ಪರಿಹರಿಸಲು ಕುಂತಿ ಪ್ರಯತ್ನಿಸುತ್ತಿದ್ದಾಳೆ. ತನ್ನ ಕಷ್ಟಕ್ಕೆ ಕಾರಣಳು ಕುಂತಿಯೆಂದು ಅರಿತ ಕರ್ಣನು ಆಕೆಯನ್ನು ಚುಚ್ಚು ಮಾತಿನಿಂದ ಚುಚ್ಚುತ್ತಿದ್ದಾನೆ.

ಕುಂತಿಯು, 'ನೀನು ಸೂರ್ಯಪುತ್ರನು. ಪಾಂಡವರ ಸುಖ–ದುಃಖದಲ್ಲಿ ಭಾಗಿಯಾಗು. ಭಾವೀ ಯುದ್ಧದಲ್ಲಿ ನಿನ್ನ ತಮ್ಮಂದಿರನ್ನು ರಕ್ಷಿಸು' ಎಂದಳು. ಕರ್ಣನು, 'ತಾಯಿ, ಸ್ತ್ರೀಯರು ಅಪವಿತ್ರರು ;

ಕ್ರೂರಿಗಳು ಮತ್ತು ಸ್ವಕಾರ್ಯ ಸಾಧಕರು. ನೀನೇ ನನ್ನಂತಹ ಸಿಂಹ ಶಿಶುವಿಗೆ ನಾಯಿತನವನ್ನು ಕೊಟ್ಟೆ. ಈಗ ಆಪತ್ತೊದಗಿದಾಗ ರಕ್ಷಣೆ ಬೇಡಲು ಬಂದಿದ್ದೀಯೆ. ನಿನ್ನ ಕೃತ್ಯಕ್ಕಾಗಿ ನೀನೇ ಮರುಗಬೇಕಾಗಿದೆ. ಕರ್ಣನು ದಾನಿಯೆನಿಸಿದ್ದಾನೆ ಕುಂತಿಯಂತಹ ಕೃಪಣನಲ್ಲ. ಅರ್ಜುನನು ಮಾತ್ರ ನನ್ನ ಬಾಣಕ್ಕೆ ಬಲಿಯಾಗುತ್ತಾನೆ; ಉಳಿದವರಲ್ಲ. ಈ ಉಪಕಾರದಿಂದ ನಾನು ನಿನ್ನ ಋಣದಿಂದ ಮುಕ್ತನಾಗುತ್ತೇನೆ' ಎಂದು ಆಕೆಯನ್ನು ಬೀಳ್ಕೊಂಡನು.

6. ವ್ಯಾಕರಣಾಂಶಗಳು :

1) ಕ್ರಿಯಾರೂಪಗಳು ಮತ್ತು ಸಂಧಿಗಳು : 1) मानयन्- ಮಾನ್ ಧಾತು, ವರ್ತಮಾನ ಕೃದಂತ, ಪ್ರಥಮಾ ವಿಭಕ್ತಿ, ಏಕವಚನ. 2) आभाष्य--ಆ + ಭಾಷ್ ಲ್ಯಬಂತ. 3) आबभाषे-ಆ+ಭಾಷ್ ಧಾತು, ಲಿಟ್ ಲಕಾರ, ಪ್ರಥಮ ಪುರುಷ ಏಕವಚನ. 4) विषीदन्तु- ವಿ+ ಸದ್ ಧಾತು, ಲೋಟ್ ಲಕಾರ, ಪ್ರಥಮ ಪುರುಷ ಬಹುವಚನ. 5) विगृह्णीयात्- ವಿ + ಗೃಹ್ ಧಾತು, ಲಿಙ್ ಲಕಾರ, ಪ್ರಥಮ ಪುರುಷ, ಏಕವಚನ. 6) सन्दधीत- ಸಮ್+ದಾ ಧಾತು, ಲಿಙ್ ಲಕಾರ, ಪ್ರಥಮ ಪುರುಷ ಏಕವಚನ. 7) शाधि- ಶಾಸ್ ಧಾತು, ಲೋಟ್ ಲಕಾರ, ಮಧ್ಯಮ ಪುರುಷ ಏಕವಚನ. 8) अयतिष्ट- ಯತ್ ಧಾತು, ಲುಙ್ ಲಕಾರ, ಪ್ರಥಮ ಪುರುಷ, ಏಕವಚನ. 9) आह- ಬ್ರೂ ಧಾತು, ಲಟ್ ಲಕಾರ, ಪ್ರಥಮ ಪುರುಷ, ಏಕವಚನ. 10) भन्त्स्यामि- ಬಂಧ್ ಧಾತು, ಲೃಟ್ ಲಕಾರ, ಉತ್ತಮ ಪುರುಷ ಏಕವಚನ. 11) उपसंहर- ಉಪ+ಸಮ್+ ಹೃ ಧಾತು, ಲೋಟ್ ಲಕಾರ, ಮಧ್ಯಮ ಪುರುಷ ಏಕವಚನ. 12) न्यवेदयत्- ನಿ+ವಿದ್ ಧಾತು, ಲಙ್ ಲಕಾರ, ಪ್ರಥಮ ಪುರುಷ, ಏಕವಚನ. 13) विससर्ज ವಿ+ಸೃ ಧಾತು, ಲಿಟ್ ಲಕಾರ, ಪ್ರಥಮ ಪುರುಷ ಏಕವಚನ. 14) चोदयामास – ಚುದ್ ಧಾತು, ಲಿಟ್ ಲಕಾರ, ಪ್ರಥಮ ಪುರುಷ, ಏಕವಚನ.

2) ಏಕಪದಗಳು :

1) वासुदेवः – वसुदेवस्य अपत्यं पुमान् ।

2) पित्र्यम् — पितुः आगतम् ।

3) सूच्यग्रभेद्याम् – सूच्याः अग्रेण भेत्तुं योग्याम् ।

4) कौन्तेयः — कुन्त्याः अपत्यं पुमान् ।

5) वैकर्तनः — विकर्तनस्य अपत्यं पुमान् ।

3) ಸಮಾಸಗಳು :

1) भारताग्र्य — अग्रे भवः अग्र्यः, भारतेषु अग्र्यः तस्य सम्बोधनम् (ಸಪ್ತಮೀ ತತ್ಪುರುಷ)

2) महासाराः — महान् सारः एषां ते (ಬಹುವ್ರೀಹಿ ಸಮಾಸ)

3) भीमार्जुनयोः — भीमश्च अर्जुनश्च तयोः (ದ್ವಂದ್ವ ಸಮಾಸ)

4) अनात्मज्ञः — आत्मानं जानाति इति आत्मज्ञः, न आत्मज्ञः (नञ् ತತ್ಪುರುಷ)

## ಪಾಠ : 8 गुरुशिष्ययोः समागमः

### [ ಗುರುಶಿಷ್ಯ ಸಮಾಗಮ ]

1. ಅವತರಣಿಕೆ :

ಶ್ರೀ ರಾಮಕೃಷ್ಣರು ಭಾರತದ ಮಹಾಯೋಗಿ, ವಿವೇಕಾನಂದರು ಮಹಾಶಿಷ್ಯರು. ಇವರು, ಗುರುವನ್ನು ಸಂದರ್ಶಿಸಿದುದು, ಗುರು ಶಿಷ್ಯನನ್ನು, ಶಿಷ್ಯನ ಗುರುವನ್ನೂ ಪರೀಕ್ಷಿಸುವುದು, ಶ್ರೀ ಗುರುವಿನ ಆದೇಶದಂತೆ ಕಾರ್ಯ ಕೈಗೊಂಡದ್ದು, ಎಲ್ಲವನ್ನೂ ವಿವರಿಸಲಾಗಿದೆ.

2. ಪಾಠಸಾರ :

ರಾಮಕೃಷ್ಣ ಪರಮಹಂಸರು, ಭಾರತದ ಮಹಾಸಂತ-ಯೋಗಿ-ತಪಸ್ವಿ-ಋಷಿ-ಮುನಿ ಇವರು, ದಕ್ಷಿಣೇಶ್ವರದ ಕಾಳಿ ಮಂದಿರದಲ್ಲಿ ಪೂಜಾರಿಯಾಗಿದ್ದರು. ತಮ್ಮ ಶಿಷ್ಯ ತಮ್ಮನ್ನು ಕಾಣಲು ಬರಲಿಲ್ಲವೆಂದು ತವಕಿಸುತ್ತಿದ್ದರು ವಿವೇಕಾನಂದನು ಗುರುವನ್ನು ಹುಡುಕಿ ಬಂದನು. ಗುರು, ಶಿಷ್ಯನನ್ನೂ ; ಶಿಷ್ಯನು ಗುರುವನ್ನೂ ಪರೀಕ್ಷಿಸಿ ಪರಸ್ಪರ ಗುರು ಶಿಷ್ಯರಾದರು.

3. ಪ್ರಶ್ನೋತ್ತರ :

ರಾಮಕೃಷ್ಣ ಪರಮಹಂಸ-ವಿವೇಕಾನಂದರು (ಗುರು-ಶಿಷ್ಯರು), ಪರಸ್ಪರ ಪರೀಕ್ಷಿಸಿ ಗುರು ಶಿಷ್ಯರಾದುದು ಹೇಗೆ ?

[ ಸೂ : ಪಾಠದ ಆಧಾರದ ಮೇಲೆ ನೀವೇ ಉತ್ತರಿಸಲು ಪ್ರಯತ್ನಿಸಿ ]

4. ಸಂದರ್ಭ ವಾಕ್ಯಗಳು :

( ಸೂಚನೆ : ಆರಂಭದಲ್ಲಿ ಬರೆಯಿರಿ : ಈ ವಾಕ್ಯವನ್ನು, ಶ್ರೀ ಕೆ ಎಸ್. ನಾಗರಾಜನ್ ಅವರು ಬರೆದ 'ದೇಶಭಕ್ತಚರಿತ' ದ 'ಗುರುಶಿಷ್ಯಯೋಃ ಸಮಾಗಮಃ' ಪಾಠದಿಂದ ಆರಿಸಲಾಗಿದೆ.)

ವಾಕ್ಯಗಳು :

1) 'लोके हिण्डसि यथा परदेशवासः ।'

ರಾಮಕೃಷ್ಣರು, ಆತ್ಮ ಸಂಬೋಧನೆ ಮಾಡುತ್ತ ಹೇಳಿದ ಮಾತಿದು : 'ಆತ್ಮವೆ, ಪರದೇಶದಲ್ಲಿ ದಿಕ್ಕುಗೆಟ್ಟು ಅಲೆಯುತ್ತಿರುವಂತೆ ಈ ಜಗತ್ತಿನಲ್ಲಿ ಅಲೆಯುತ್ತಿರುವೆ. ಸಾವಧಾನ ಚಿತ್ತತೆಯಿಂದ ಆತ್ಮರಕ್ಷಣೆಗೆ ತೊಡಗು.'

2) 'तस्य वशो न भवाम्यधुना ।'

ಬಾಲಕ ನರೇಂದ್ರನು, 'ಇನ್ನು ಈ ಮಾಂತ್ರಿಕನ ಕೈಗೆ ಸಿಗಲಾರೆ' ಎಂದು ನಿರ್ಧಾರ ಮಾಡಿದನು. ಆದರೆ ಅದು ಸಾಧ್ಯವಾಗಲಿಲ್ಲ. ಗುರುವಿನ ಹಿಡಿತದಿಂದ ತಪ್ಪಿಸಿಕೊಳ್ಳದಾದನು.

Radha. B.V.



5. ವ್ಯಾಕರಣಾಂಶಗಳು :

1) ಕ್ರಿಯಾರೂಪಗಳು : 1) विराजते- ವಿ + ರಾಜ್ ಧಾತು, ಲಟ್ ಲಕಾರ, ಪ್ರಥಮ ಪುರುಷ ಏಕವಚನ. 2) धृत्वा- ಧೃ ಧಾತು, ಕ್ತ್ವಾಂತಾವ್ಯಯ 3) अधीत्य- ಇಙ್ (ಅಧ್ಯಯನ) ಧಾತು, ಲ್ಯಬಂತ ಅವ್ಯಯ 4) बुबुधे- ಬುಧ್ ಧಾತು, ಲಿಟ್ ಲಕಾರ, ಪ್ರಥಮ ಪುರುಷ, ಏಕವಚನ. 5) प्रससार- ಪ್ರ + ಸೃ ಧಾತು, ಲಿಟ್ ಲಕಾರ, ಪ್ರಥಮ ಪುರುಷ ಏಕವಚನ. 6) अद्राक्षीत्- ದೃಶ್ ಧಾತು, ಲುಙ್ ಲಕಾರ, ಪ್ರಥಮ ಪುರುಷ, ಏಕವಚನ. 7) अमन्यत- ಮಾನ್ ಧಾತು, ಲಙ್ ಲಕಾರ, ಪ್ರಥಮ ಪುರುಷ ಏಕವಚನ. 8) ददृशिरे- ದೃಶ್ ಧಾತು, ಲಿಟ್ ಲಕಾರ, ಪ್ರಥಮ ಪುರುಷ, ಬಹುವಚನ. 9) चकाशिरे- ಕಾಶ್ ಧಾತು, ಲಿಟ್ ಲಕಾರ, ಪ್ರಥಮ ಪುರುಷ ಬಹುವಚನ.

2) ಸಮಾಸಗಳು :

1) कृतोद्वाहः - कृतः उद्वाहः येन सः (ಬಹುವ್ರೀಹಿ)

2) स्वस्थचित्तः — स्वस्थं चित्तं यस्य सः (ಬಹುವ್ರೀಹಿ)

6. ಕಠಿಣ ಪದಗಳ ಅರ್ಥ :

धृत्वा–ಧರಿಸಿ समाहार–ಒಟ್ಟುಗೂಡಿದ नलिनीपत्र–ಕಮಲದ ಎಲೆ भवतारिणी– ಭವಸಾಗರವನ್ನು ದಾಟಿಸುವವಳು शेमुषी – ಬುದ್ಧಿ जलबिन्दुरिव – ನೀರಿನ ಹನಿಯಂತೆ अधीत्य – ಅಧ್ಯಯನ ಮಾಡಿ.

ಶ್ಲೋಕಭಾಗ :

## ಪಾಠ 9 सुग्रीवसख्यम्

### [ಸುಗ್ರೀವನ ಸ್ನೇಹ]

1. ಅವತರಣಿಕೆ :

'समानदुःखसखाकार्यः'– ಎಂದು ವಾಲ್ಮೀಕಿಯೇ ಹೇಳಿದ್ದಾನೆ. ಶ್ರೀರಾಮನಿಗೂ–ಸುಗ್ರೀವನಿಗೂ ಸಖ್ಯ ಬೆಳೆಯುಲು ನಾನಾಸನ್ನಿವೇಶಗಳು ಬಂದೊದಗಿದ್ದವು. ರಾಮ, ರಾಜ್ಯವನ್ನು ತೊರೆದು ಬಂದಿದ್ದನು, ಸುಗ್ರೀವನು, ಅಣ್ಣ ವಾಲಿಯು ರಾಜ್ಯವನ್ನು ತೊರಿಸಿದ ಕಾರಣ ತೊರೆದು ಬಂದಿದ್ದನು; ರಾಮನ ಪತ್ನಿಯನ್ನು, ರಾವಣನು ಕದ್ದೊಯ್ದಿದ್ದನು ; ವಾಲಿಯು, ಸುಗ್ರೀವನ ಪತ್ನಿಯನ್ನು ಅಪಹರಿಸಿದ್ದನು — ಈ ಎಲ್ಲ ಕಾರಣಗಳೂ ಇವರಲ್ಲಿ ಪರಸ್ಪರ ಸ್ನೇಹ ಬೆಳೆಯುಲು ಕಾರಣವಾಯಿತು.

2. ರಾಮಾಯಣ–ವಾಲ್ಮೀಕಿ : (ಟಿಪ್ಪಣಿ)
(ಆದಿಕಾವ್ಯ–ಆದಿಕವಿ)

ರಾಮಾಯಣವು ಭಾರತದ ರಾಷ್ಟ್ರೀಯ ಮಹಾಕಾವ್ಯ. ಸಂಸ್ಕೃತ ಕಾವ್ಯ ಪರಂಪರೆಗೆ ವಾಲ್ಮೀಕಿ ಅದಿಕವಿ. ಈತನೇ ರಾಮಾಯಣದ ಕರ್ತೃ 'प्रचेतसो मुनिवृषा प्रथमः कवीनाम्' ಎಂಬುದೂ 'आद्यः कविरसि' ಎಂಬುದೂ ಈ ಮೇಲಿನ ಮಾತಿಗೆ ಸಾಕ್ಷಿ. ಮುಂದಿನ ಕವಿ – ನಾಟಕಕಾರರಿಗೆ ವಾಲ್ಮೀಕಿಯೇ ಮಾರ್ಗದರ್ಶಕನಾಗಿ ಉಳಿದಿದ್ದಾನೆ. ಭಾರತದ ಭಾಷೆಗಳಲ್ಲೇ ಅಲ್ಲದೆ ವಿಶ್ವದ ಭಾಷೆಗಳಲ್ಲಿಯೂ ರಾಮಾಯಣದ ಅವತರಣಿಕೆಗಳು ಅವತರಿಸಿವೆ.

'ವಾಲ್ಮೀಕಿ' ನಾಮ ಕಾರಣ :

ಸಂಸ್ಕೃತದಲ್ಲಿ 'ಹುತ್ತ'ಕ್ಕೆ ವಲ್ಮೀಕ ಎಂದು ಹೇಳಲಾಗುತ್ತದೆ. ವಾಲ್ಮೀಕಿ – ಹುತ್ತ (ವಲ್ಮೀಕ) ದಿಂದ ಹುಟ್ಟಿ ಬಂದದ್ದರಿಂದ ವಾಲ್ಮೀಕಿ

ಎಂದಾಯಿತು. ('वल्मीकान्निर्गतः प्रादुर्भूतः इति वाल्मीकः वाल्मीक एव वाल्मीकिः')

ಜೀವನವೃತ್ತಾಂತ : ರಾಮಾಯಣದ ಉತ್ತರಕಾಂಡ, ಅಧ್ಯಾತ್ಮ ರಾಮಾಯಣ, ಆನಂದರಾಮಾಯಣ ಮುಂತಾದವುಗಳು ವಾಲ್ಮೀಕಿಯ ಜೀವನವೃತ್ತಾಂತವನ್ನು ಒದಗಿಸಿವೆ. ಇವುಗಳ ಆಧಾರದಿಂದ ವಾಲ್ಮೀಕಿಯು ವರುಣದೇವನ ಪುತ್ರರಲ್ಲೊಬ್ಬರಾದ ಋಷಿಯೆಂದೂ, ಭಾರ್ಗವ ವಂಶದವನೆಂದೂ, ಜಾತ್ಯಾ ಬ್ರಾಹ್ಮಣನಾದರೂ ಸಹವಾಸದೋಷದಿಂದ ನೀಚತ್ವ ಪಡೆದನೆಂದೂ, ಸಪ್ತರ್ಷಿಗಳ ಉಪದೇಶದಿಂದ 'ಮರ' ಮಂತ್ರದ ಪರಿಣಾಮವಾಗಿ ತಪಸ್ಸು ಮಾಡುತ್ತಾ ಸುತ್ತಲೂ ಬೆಳೆದ ಹುತ್ತದಿಂದ ಎದ್ದು ಬಂದುದರಿಂದ ವಾಲ್ಮೀಕಿಯಾದನೆಂದೂ, ಮೊದಲ ಹೆಸರು ರತ್ನಾಕರನೆಂದು ತಿಳಿದುಬರುತ್ತದೆ.

ದೇಶ-ಕಾಲ : ವಾಲ್ಮೀಕಿಯು ರಾಮಾನುಗ್ರಹ ಪಡೆದು ಚಿತ್ರಕೂಟದಲ್ಲಿದ್ದನೆಂದು ಪ್ರತೀತಿಯಿದೆ. ಇವನ ಕಾಲ ಬೌದ್ಧ ಧರ್ಮಕ್ಕಿಂತ ಪ್ರಾಚೀನವಾದ ಕಾರಣ ಕ್ರಿಸ್ತಪೂರ್ವ ಆರನೆಯ ಶತಮಾನವೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

ವಾಲ್ಮೀಕಿಯ ಮಹತ್ಕಾರ್ಯ :

ಶ್ರೀಮದ್ರಾಮಾಯಣದ ಕವಿಯಾಗಿ ಮಾತ್ರ ವಾಲ್ಮೀಕಿ ಉಳಿದಿಲ್ಲ. ಆತನ ಮಹತ್ಕಾರ್ಯಗಳು ಈ ರೀತಿ ಇವೆ :

1) ರಾಮಪರಿತ್ಯಕ್ತೆಯಾದ ಸೀತೆಗೆ ಆಶ್ರಯದಾತನೆನಿಸಿದ್ದಾನೆ.
2) ಸೀತೆಯ ಮಕ್ಕಳಾದ ಲವಕುಶರಿಗೆ ಸಾಕುತಂದೆಯಾಗಿದ್ದಾನೆ.
3) ರಾಮ–ಸೀತಾ ಪುನಸ್ಸಮಾಗಮಕ್ಕೆ ಭೂಮಿಕೆಯಾಗಿದ್ದಾನೆ.
4) ಇಂತು ವಾಲ್ಮೀಕಿಯ ಕುಸುಮಕೋಮಲ ಸ್ವಭಾವಚಿತ್ರ ರಾಮಾಯಣದ ಆರಂಭದಲ್ಲೇ ಚಿತ್ರಿತವಾಗಿದೆ.

ಭಾಷಾಶೈಲಿ : ಶೋಕದಿಂದ ಶ್ಲೋಕ ('मा निषाद') ಮೂಡಿಬಂದ

ಈ ರಾಮಾಯಣದಲ್ಲಿ ಜಾನಪದ ಸಂಸ್ಕೃತ ನುಡಿಯ ಸರಳತೆಯಿದೆ. ಸತ್ವವಿದೆ; ಸೊಬಗುಗಳ ಸುಂದರ ಸಮ್ಮಿಶ್ರಣವಿದೆ; ಸಮಾಸಗಳ ಹಾವಳಿಯಿಲ್ಲ. ದುಷ್ಕರ ಅಲಂಕಾರಗಳ ಗೋಜಿಲ್ಲ. ಇದರಲ್ಲಿ ಒಟ್ಟು 24;000 ಶ್ಲೋಕಗಳಿವೆ. ಈ ಎಲ್ಲವೂ ಬಾಲ, ಅಯೋಧ್ಯಾ, ಅರಣ್ಯ, ಕಿಷ್ಕಿಂಧ, ಸುಂದರಕಾಂಡ, ಯುದ್ಧಕಾಂಡ, ಉತ್ತರಕಾಂಡವೆಂದು ಏಳು ಕಾಂಡಗಳಲ್ಲಿ ವಿಭಕ್ತವಾಗಿವೆ.

ಮಹತ್ತು–ಬೃಹತ್ತು : ವಾಲ್ಮೀಕಿ ರಾಮಾಯಣ ಸಾವಿರಾರು ಸಾಹಿತ್ಯ ಕೃತಿಗಳಿಗೆ ಗಂಗೋತ್ರಿಯೆನಿಸಿದೆ ; ಇದು ಭಾರತವನ್ನು ಪಾವನಗೊಳಿಸಿದ ಗಂಗೆ ಎನಿಸಿದೆ. ಸಹಸ್ರಾರು ವರ್ಷಗಳಿಂದ ಕೋಟ್ಯಾಂತರ ಜನಗಳ ಬಾಳು ಬೆಳಗಿದ ರಾಮಾಯಣಕ್ಕೆ ಮಹಾಭಾರತವೊಂದೇ ಸಮವೆನಿಸುವ ಉಪಮಾನವೆಂದರೆ ತಪ್ಪಲ್ಲ. ಇವೆರಡೂ ಗ್ರಂಥಗಳು ವಿಶ್ವಶಾರದಾ ಭಂಡಾರದ ಮಹಾಮಾಣಿಕ್ಯಗಳು.

ಪ್ರಸ್ತುತ ಭಾಗ : "श्रीमद्रामायणस्य उत्पत्तिः" ಎಂಬುದು ಆದಿಕಾವ್ಯ (ರಾಮಾಯಣದ) ಸೃಷ್ಟಿಯ ಹಿನ್ನೆಲೆಯನ್ನು ಸೂಚಿಸುತ್ತದೆ.

1) ವಾಲ್ಮೀಕಿ ಮತ್ತು ಕ್ರೌಂಚಕ್ರಂದನ.
2) ತಮಸಾ ತೀರದ ಘಟನೆ ಮತ್ತು ವಾಲ್ಮೀಕಿಯ ಮೇಲೆ ಆದ ಪರಿಣಾಮ.
3) ವ್ಯಾಧನಿಗೆ ವಾಲ್ಮೀಕಿಯ ಶಾಪ.
4) ಶೋಕದಿಂದ ಶ್ಲೋಕೋತ್ಪತ್ತಿ.

[ ತಾತ್ಪರ್ಯ ಭಾಗವನ್ನು ನೋಡಿರಿ. ಸಮರ್ಪಕವಾದ ಉತ್ತರವನ್ನು ಕೊಡಲಾಗಿದೆ.]

1) ವಾಲ್ಮೀಕಿ – ಬ್ರಹ್ಮ ಸಮಾಗಮ.
2) ಬ್ರಹ್ಮನ ರಾಮಾಯಣ ರಚನಾ ಪ್ರಚೋದನೆ
[ ತಾತ್ಪರ್ಯ ಭಾಗವನ್ನು ನೋಡಿ. ]

3. ಶ್ಲೋಕಗಳ ಭಾವವಿವರಣೆ : (ಸಂದರ್ಭ ವಿವರಣೆ ಸಹಿತ)

[ಸೂಚನೆ : ಸಂದರ್ಭ ವಾಕ್ಯ ಬರೆಯುವ ಮುನ್ನ ಈ ಅಂಶವನ್ನು ಬರೆಯಿರಿ : ಈ ವಾಕ್ಯವನ್ನು ವಾಲ್ಮೀಕಿ ವಿರಚಿತ ರಾಮಾಯಣದ 'ಸುಗ್ರೀವಸಖ್ಯಂ' ಭಾಗದಿಂದ ಆರಿಸಲಾಗಿದೆ.]

ಶ್ಲೋಕ 1+2 : ಹನುಮಂತನು ಮಹಾಬುದ್ಧಿಶಾಲಿಯಾದುದರಿಂದ ತಾನು ಧರಿಸಿದ್ದ ಭಿಕ್ಷು ರೂಪವನ್ನು ತೊರೆದು ನಿಜರೂಪವಾಂತು ವೀರರಾದ ಶ್ರೀರಾಮಲಕ್ಷ್ಮಣರೀರ್ವರನ್ನೂ ತನ್ನ ಹೆಗಲಮೇಲೆ ಕೂರಿಸಿಕೊಂಡು ಸುಗ್ರೀವನ ಬಳಿಗೈದಿದನು. ವಿಸ್ತಾರವಾದ ಕೀರ್ತಿಯುಳ್ಳವನೂ, ವಾನರರಲ್ಲಿ ಪ್ರಸಿದ್ಧನಾದವನೂ ಕಾರ್ಯವನ್ನು ಸಾಧಿಸಿದವನು ಸಂತೋಷಪಡುವಂತೆ ಸಂತೋಷಿಸುತ್ತಿರುವವನೂ, ಮಹಾಪರಾಕ್ರಮಶಾಲಿಯೂ ಶುಭಕರವಾದ ಬುದ್ಧಿಯುಳ್ಳವನೂ ಆದ ಹನುಮಂತನು ರಾಮಲಕ್ಷ್ಮಣರೊಡಗೂಡಿ ಸುಗ್ರೀವನಿದ್ದೆಡೆಗೆ ಹೋದನು.

ಶ್ಲೋಕ 3, 4, 5, 6, 7 : ಹನುಮಂತನು ಋಷ್ಯಮೂಕಪರ್ವತದಿಂದ ಮಲಯಪರ್ವತದ ಬಳಿಗೈದಿ ಕಪಿರಾಜನಾದ ಸುಗ್ರೀವನನ್ನು ಕಂಡು ಮಹಾಪರಾಕ್ರಮಿಗಳಾದ ಆ ರಘುಕುಲೋದ್ಭವರ ವಿಷಯವನ್ನಾತನಿಗೆ ತಿಳಿಸಬಯಸಿ ಆತನನ್ನು ಕುರಿತು, "ಎಲೈ ವಾನರೇಶ್ವರನೇ ! ಸುಗ್ರೀವನೇ ಅದೋ ನೋಡು, ಮಹಾಬುದ್ಧಿಶಾಲಿಯೂ, ಪರಾಕ್ರಮಿಯೂ ದೃಢವಿಕ್ರಮನೂ ಆದ ಶ್ರೀರಾಮ ಮೂರ್ತಿಯು, ತಮ್ಮನಾದ ಲಕ್ಷ್ಮಣನೊಡಗೂಡಿ ಇಲ್ಲಿಗೆ ಬಂದಿರುವನು. ಈತನು ಇಕ್ಷ್ವಾಕುರಾಯನ ವಂಶದಲ್ಲಿ ಹುಟ್ಟಿದವನು, ದಶರಥರಾಜಕುಮಾರನು, ಧರ್ಮವನ್ನೆಡೆಬಿಡದೆ ಆಚರಿಸುವುದರಲ್ಲಿ ಸುಪ್ರಸಿದ್ಧನಾಗಿ, ಜನಕನಾಜ್ಞೆತಿಯನ್ನು ಸಂಪೂರ್ಣವಾಗಿ ನೆರವೇರಿಸಿರುವವನು ಅಂತ್ಯಾ ಸುಗ್ರೀವನೇ ! ಈ ಮಹನೀಯನು ತಂದೆಯ ಆಜ್ಞೆಯನ್ನು ಪರಿಪಾಲಿಸುವ ವ್ರತದಲ್ಲಿ ನಿರತನಾಗಿ ವನವಾಸ ಮಾಡುತ್ತಿರಲು ರಾವಣನೆಂಬ ದುಷ್ಟ ರಾಕ್ಷಸನು ಈತನ ಭಾರ್ಯೆಯನ್ನು ಅಪಹರಿಸಿದನು. ಇಂತಹವನು ಈಗ ನಿನ್ನನ್ನು ಶರಣುಹೊಕ್ಕಿರುವನು. ಎಲೈ ಸುಗ್ರೀವನೇ! ಅಣ್ಣತಮ್ಮಂದಿರಾದ ಈ ರಾಮಲಕ್ಷ್ಮಣರಿಬ್ಬರೂ ನಿನ್ನೊಡನೆ ಸ್ನೇಹವನ್ನು

ಬೆಳೆಸಬೇಕೆಂದಪೇಕ್ಷಿಸಿರುವರು. ಈ ರಾಮಲಕ್ಷ್ಮಣರಿಬ್ಬರೂ ಪೂಜನೀಯ ರಾದುದರಿಂದ ಇವರನ್ನು ಎದುರುಗೊಂಡು ಯಥೋಚಿತವಾಗಿ ಪೂಜಿಸು ವವನಾಗು" ಎಂದು ಹೇಳಿದನು.

ಸಂದರ್ಭ ವಾಕ್ಯ :

'धर्मे निगदितश्चैव पितुर्निर्देशकारकः ।'

ಶ್ಲೋಕ 8, 9, 10, 11 : ಆ ವಾನರಾಧಿಪನಾದ ಸುಗ್ರೀವನು ತನ್ನ ಕಪಿರೂಪವನ್ನು ಮರೆಸಿ ದರ್ಶನೀಯವಾದ ಮನುಷ್ಯರೂಪವನ್ನು ಹೊಂದಿ ರಘುಕುಲ ಸಂಜಾತನಾದ ಶ್ರೀರಾಮನೊಡನೆ ಪ್ರೀತಿಪುರಸ್ಸರ ವಾದ ಮಾತುಗಳನ್ನಾಡಬಯಸಿ "ಎಲೈ ರಘುಕುಲೋತ್ತಮನಾದ ಶ್ರೀ ರಾಮನೇ ! ನೀನು ಧರ್ಮದಲ್ಲಿ ಆಸಕ್ತಿಯುಳ್ಳವನು ; ಮಹಾಪರಾಕ್ರಮ ಶಾಲಿಯು, ಸಮಸ್ತ ಪ್ರಾಣಿಗಳಲ್ಲಿಯೂ ದಯೆಯುಳ್ಳವನು ನಿನ್ನ ಸದ್ಗು ಣಗಳೆಲ್ಲವನ್ನೂ ವಾಯುಪುತ್ರನಾದ ಹನುಮಂತನಿಂದ ಯಥಾವತ್ತಾಗಿ ಕೇಳಿದೆನು. ಆದುದರಿಂದ ಎಲೈ ಪ್ರಭುವೇ ! ಮಹಾನುಭಾವನಾದ ನೀನು ವಾನರನಾದ ನನ್ನೊಡನೆ ಸ್ನೇಹವನ್ನು ಬೆಳೆಸಬೇಕೆಂದು ಬಯಸಿರುವುದು ನನಗೆ ದೊಡ್ಡ ಸನ್ಮಾನವೂ, ಲಾಭವೂ ಆಗಿರುವುದು. ಇದಕ್ಕಿಂತಲೂ ಅಧಿಕವಾದ ಲಾಭವು ನನಗಿನ್ನಾವುದೂ ಇಲ್ಲ. ಎಲೈ ಶ್ರೀರಾಮನೇ ! ನಿನಗೆ ನಿಜವಾಗಿಯೂ ನನ್ನೊಡನೆ ಸ್ನೇಹ ಮಾಡಿಕೊಳ್ಳಬೇಕೆಂದು ಅಪೇಕ್ಷೆ ಯಿರುವುದೇ ಆದರೆ ಇದೋ ಕೈ ನೀಡಿರುವೆನು. ಈ ನನ್ನ ಕೈಯನ್ನು ನಿನ್ನ ಕೈಯಿಂದ ಹಿಡಿದು ಸ್ನೇಹಿತರ ಮರ್ಯಾದೆಯನ್ನು ದೃಢಪಡಿಸು" ಎಂದನು.

ಸಂದರ್ಭ ವಾಕ್ಯ :

'गृह्यतां पाणिना पाणिर्मर्यादाबध्यतां ध्रुवा ।'

ಶ್ಲೋಕ 12, 13, 14, 15, 16, 17 : ಸುಗ್ರೀವನು ಈ ರೀತಿ ನುಡಿದುದನ್ನು ಕೇಳಿ, ಪರಮಸಂತುಷ್ಟನಾದ ಶ್ರೀ ರಾಮನು ತನ್ನ ಕೈ ಯಿಂದ ಸುಗ್ರೀವನ ಕೈಯನ್ನು ಹಿಡಿದುಕೊಂಡು ದೃಢವಾದ ಸ್ನೇಹದ ಮರ್ಯಾದೆಯನ್ನು ತೋರಿದುದಲ್ಲದೆ ಅವನನ್ನು ಗಟ್ಟಿಯಾಗಿ ಆಲಿಂಗಿಸಿ

ಕೊಂಡನು. ಇದಾದಮೇಲೆ ಶತ್ರುಭಯಂಕರನಾದ ಹನುಮಂತನೂ, ಭಿಕ್ಷು ರೂಪವನ್ನು ತೊರೆದು ವಾನರ ರೂಪವನ್ನು ಧರಿಸಿ ಅರಣಿಗೆ ಉಚಿತ ವಾದ ಕಟ್ಟಿಗೆಗಳನ್ನುಜ್ಜಿ ಬೆಂಕಿಯನ್ನೆಬ್ಬಿಸಿದನು. ಹೀಗೆ ಅಗ್ನಿಯು ಪ್ರಜ್ವಲಿಸುತ್ತಿರಲು ಹನುಮಂತನದನ್ನು ಪುಷ್ಪಗಳಿಂದ ಪೂಜಿಸಿ ಸಂಸ್ಕೃತ ವಾದ ಆ ಅಗ್ನಿಯನ್ನು ರಾಮಸುಗ್ರೀವರ ನಡುವೆ ತಂದಿಟ್ಟನು. ಆಗ ರಾಮ-ಸುಗ್ರೀವರಿಬ್ಬರೂ ಪ್ರಜ್ವಲಿಸುತ್ತಿರುವ ಆ ಯಜ್ಞೇಶ್ವರನ ಸುತ್ತ ಲೂ ಒಬ್ಬರ ಕೈಯನ್ನೊಬ್ಬರು ಹಿಡಿದುಕೊಂಡು ಪ್ರದಕ್ಷಿಣ ಮಾಡಿ ಅಗ್ನಿಸಾಕ್ಷಿಕವಾಗಿ ಸ್ನೇಹವನ್ನು ಮಾಡಿಕೊಂಡರು. ಆ ಬಳಿಕ ಅವರಿಬ್ಬರೂ ಸುಪ್ರಸನ್ನಮನಸ್ಕರಾಗಿ ಒಬ್ಬರನ್ನೊಬ್ಬರು ಪ್ರೀತಿಯಿಂದ ಎವೆಯಿಕ್ಕದೆ ನೋಡುತ್ತಾ ತೃಪ್ತಿ ಹೊಂದಿದರು. ಸುಗ್ರೀವನು ಪರಮ ಸಂತುಷ್ಟನಾಗಿ "ಎಲೈ ಶ್ರೀರಾಮನೇ ! ನೀನು ನನಗೆ ಪ್ರಿಯಂಕರನಾದ ಸ್ನೇಹಿತನಾದೆ. ನಮ್ಮಿಬ್ಬರಿಗೂ ಸುಖದುಃಖಗಳು ಏಕರೀತಿಯಾಗಿರಬೇಕು" ಎಂದು ಹೇಳಿದನು.

ಸಂದರ್ಭ ವಾಕ್ಯ :

i) 'सम्प्रहृष्टमना हस्तं पीडयामास पाणिना ।'

ii) 'दीप्यमानं ततो वह्निं पुष्पैरभ्यर्च्य सत्कृतम् ।'

iii) 'त्वं वयस्योऽसि हृद्यो मे ह्येकं दुःखं सुखं च नौ ।'

ಶ್ಲೋಕ 18, 19, 20, 21 : ಸುಗ್ರೀವನು, ಪರಮಸಂತೋಷ ವುಳ್ಳವನೂ, ಆ ಸಂತೋಷದಿಂದಲೇ ಕಣ್ಣುಗಳಿಂದ ಆನಂದಬಾಷ್ಪಗಳನ್ನು ಸುರಿಸುತ್ತಿರುವವನೂ ಆಗಿ ಮೃದುಮಧುರವಾದ ಮಾತುಗಳಿಂದ ರಾಮ ನನ್ನು ಕುರಿತು; "ಎಲೈ ರಘುನಂದನನಾದ ಶ್ರೀರಾಮಮೂರ್ತಿಯೇ ! ನಾನು ವಾಲಿಯಿಂದ ಅಪಕೃತನೂ, ಬಹಳವಾದ ಭಯದಿಂದ ಪೀಡಿತನೂ, ಅಪಹರಿಸಲಾದ ಹೆಂಡತಿಯುಳ್ಳವನೂ ಆಗಿ ಇತರರಿಂದ ಪ್ರವೇಶಿಸಲಸದಳ ವಾದ ಈ ದುರ್ಗವನ್ನಾಶ್ರಯಿಸಿರುವೆನು. ಅಯ್ಯಾ ರಾಘವನೇ ! ನಾನು ಅಣ್ಣನಾದ ವಾಲಿಯಿಂದ ವಂಚಿತನಾಗಿರುವೆನಲ್ಲದೆ ಆತನೊಡನೆ ವೈರವನ್ನೂ ಕಟ್ಟಿಕೊಂಡಿರುವೆನು, ಇಂತಹ ನಾನು ಆ ವಾಲಿಭಯದಿಂದ ತತ್ತರಿಸಿ

ಏನು ಮಾಡುವುದಕ್ಕೂ ತೋರದೆ ಭ್ರಾಂತನಂತೆ ಈ ಕಾಡಿನಲ್ಲಿ ವಾಸಮಾಡಿ ಕೊಂಡಿದ್ದೇನೆ. ಹೀಗೆ ವಾಲಿ ಭಯದಿಂದ ಆರ್ತನಾಗಿರುವ ನನಗೆ ಅಭಯ ವನ್ನು ಕೊಡು. ಈಗ ನೀನೇ ನನಗೆ ಗತಿ. ಎಲೈ ಶ್ರೀರಾಮನೇ ! ನನಗೆ ಇನ್ನು ಮುಂದೆ ವಾಲಿಯ ಭಯವಿಲ್ಲದಂತೆ ಮಾಡುವವನಾಗು" ಎಂದನು.

ಸಂ. ವಾಕ್ಯ : 'अहं विनिकृतो राम चरामीह भयार्दितः ।'

ಶ್ಲೋಕ 22, 23, 24 : ಸುಗ್ರೀವನ ಮಾತುಗಳನ್ನು ಕೇಳಿ ಮಹಾತೇಜಸ್ವಿಯೂ, ಧರ್ಮವತ್ಸಲನೂ ಆದ ಶ್ರೀರಾಮನು ನಸುನಗುತ್ತ ಆ ಸುಗ್ರೀವನನ್ನು ಕುರಿತು, " ಎಲೈ ಕಪಿಶ್ರೇಷ್ಠನೇ ! ಸ್ನೇಹವನ್ನು ಬೆಳೆ ಸುವುದಕ್ಕೆ ಉಪಕಾರವನ್ನು ಮಾಡುವುದೇ ಫಲವೆಂಬುದನ್ನು ನಾನುಬಲ್ಲೆ ನು. ನಿನ್ನ ಭಾರ್ಯೆಯನ್ನಪಹರಿಸಿದ ಆ ವಾಲಿಯನ್ನು ವಧಿಸುತ್ತೇನೆ. ಇದರಲ್ಲಿ ಸಂದೇಹವಿಲ್ಲ. ಎಲೈ ಸುಗ್ರೀವನೇ ! ನನ್ನ ಬಾಣಗಳು ಬಹು ತೀಕ್ಷ್ಣಗಳಾಗಿಯೂ, ಸೂರ್ಯನಿಗೆ ಸರಿಹೋಲುವುವಾಗಿಯೂ, ವ್ಯರ್ಥ ವಾಗದಿರುವುವಾಗಿಯೂ ಇರುವುವು. ಆದುದರಿಂದ ಈ ಬಾಣಗಳು ದುರ್ಮಾರ್ಗಿಯಾದ ಆ ವಾಲಿಯನ್ನು ಕೊಲ್ಲುವುದರಲ್ಲಿ ಬಹಳ ವೇಗವಾಗಿವೆ. ಗರಿಗಳಿಂದ ಕೂಡಿ ಅತಿ ವೇಗವುಳ್ಳವುಗಳೂ, ಇಂದ್ರನ ವಜ್ರಾಯುಧದಂತೆ ಅತಿ ತೀಕ್ಷ್ಣವಾದವುಗಳೂ, ಮೊನಚಾದ ತುದಿಗಳು, ಬಲವಾದ ಗಿಣ್ಣು ಗಳು ಇವುಗಳನ್ನೊಳಗೊಂಡು ರೋಷಗೊಂಡ ಕಾಲಸರ್ಪಗಳಂತಿರುವುವೂ ಆದ ಈ ಬಾಣಗಳು ದುರಾಚಾರನಾದ ಆ ವಾಲಿಯ ಮೇಲೆ ಬೀಳಲು, ಅವನು ಒಡೆದು ಪರ್ವತದಂತೆ ಭೂಮಿಗೆ ಬೀಳುವನು, ನೀನು ಭಯಪಡ ಬೇಡ " ಎಂದು ಹೇಳಿದನು.

ಸಂ. ವಾಕ್ಯ : 'उपकारफलं मित्रं विदितं मे महाकपे ।'

ಶ್ಲೋಕ 25 : ಶ್ರೀರಾಮನ ಮಾತುಗಳನ್ನು ಕೇಳಿ ಸುಗ್ರೀವನು ಪರಮಾನಂದಭರಿತನಾಗಿ, " ಎಲೈ ರಘುಕುಲೋದ್ಭವನೇ ! ಪುರುಷೋತ್ತ ಮನಾದ ಶ್ರೀರಾಮನೇ, ನಿನ್ನ ಅನುಗ್ರಹದಿಂದ ನಾನು ಭಾರ್ಯೆಯನ್ನೂ

ರಾಜ್ಯವನ್ನೂ ಹೊಂದಬಲ್ಲೆನು.. ನನಗೆ ಪರಮಶತ್ರುವಾದ ಆ ವಾಲಿಯು ಯಾವ ರೀತಿಯಲ್ಲಿ ಪ್ರಯತ್ನಿಸಿದರೆ ಮಡಿಯುವನೋ ಆ ರೀತಿ ಪ್ರಯತ್ನಿಸು " ಎಂದು ಮಹಾರ್ಥಗರ್ಭಿತವಾದ ಮಾತುಗಳನ್ನಾಡಿದನು.

ಸಂ. ವಾಕ್ಯ : 'तथा कुरु त्वं .... पुनर्ममाग्रजम् ।'

4. ಪ್ರಶ್ನೋತ್ತರ :

ಶ್ರೀರಾಮ-ಸುಗ್ರೀವರು ಪರಸ್ಪರ ಭೇಟಿಯಾದ ಸಂದರ್ಭ ಯಾವುದು ? ಹನುಮಂತನು, ಸುಗ್ರೀವನಿಗೆ ಶ್ರೀರಾಮಲಕ್ಷ್ಮಣರ ಪರಿಚಯವನ್ನು ಎಂತು ಮಾಡಿಕೊಟ್ಟನು ? ಸುಗ್ರೀವ-ರಾಮರ ನಡುವೆ ನಡೆದ ಸಂಭಾಷಣೆಯೇನು ? ಸಂಕ್ಷೇಪದಲ್ಲಿ ವಿವರಿಸಿ.

[ ಸೂಚನೆ : ಶ್ಲೋಕಭಾಗದ ಭಾವವಿವರಣೆಯನ್ನು ನೋಡಿ. ]

5. ವ್ಯಾಕರಣಾಂಶಗಳು :

I) ಕ್ರಿಯಾರೂಪಗಳು : 1) जगाम – ಗಮ್ ಧಾತು, ಲಿಟ್ ಲಕಾರ, ಪ್ರಥಮ ಪುರುಷ, ಏಕವಚನ. 2) आचचक्षे – ಆ + ಚಕ್ಷ್ ಧಾತು, ಲಿಟ್ ಲಕಾರ, ಪ್ರಥಮ ಪುರುಷ ಏಕವಚನ. 3) अर्चयस्व – ಅರ್ಚ್ ಧಾತು, ಲೋಟ್ ಲಕಾರ, ಮಧ್ಯಮ ಪುರುಷ ಏಕವಚನ. 4) उवाच – ವದ್ ಧಾತು, ಲಿಟ್ ಲಕಾರ, ಪ್ರಥಮ ಪುರುಷ, ಏಕವಚನ. 5) पर्यष्वजत – ಪರಿ + ಸ್ವ ಧಾತು, ಲಙ್ ಲಕಾರ, ಪ್ರಥಮ ಪುರುಷ ಏಕವಚನ. 6) निदधौ – ನಿ + ಧಾ ಧಾತು, ಲಿಟ್ ಲಕಾರ, ಪ್ರಥಮ ಪುರುಷ, ಏಕವಚನ. 7) चक्रतुः – ಕೃ ಧಾತು, ಲಿಟ್ ಲಕಾರ, ಪ್ರಥಮ ಪುರುಷ, ದ್ವಿವಚನ. 8) भवेत् – ಭೂ ಧಾತು, ವಿಧಿಲಿಙ್, ಪ್ರಥಮ ಪುರುಷ, ಏಕವಚನ. 9) प्रत्यभाषत – ಪ್ರತಿ + ಭಾಷ್ ಧಾತು, ಲಙ್ ಲಕಾರ, ಪ್ರಥಮ ಪುರುಷ, ಏಕವಚನ. 10) अब्रवीत् – ಬ್ರೂ ಧಾತು, ಲಙ್ ಲಕಾರ, ಪ್ರಥಮ ಪುರುಷ, ಏಕವಚನ. 11) हिंस्यात् – ಹನ್ ಧಾತು, ವಿಧಿಲಿಙ್, ಪ್ರಥಮ ಪುರುಷ, ಏಕವಚನ. 12) समान्नुयाम् –

ಸಮ್ + ಆಪ್ ಧಾತು, ವಿಧಿಲಿಙ್, ಉತ್ತಮ ಪುರುಷ, ಏಕವಚನ.

2) ಏಕಪದಗಳು :

1) राघवौ— रघोः गोत्रापत्ये पुमांसौ ।
2) सौहार्दम्— सुहृदः भावः ।
3) काकुत्स्थः — ककुत्स्थस्य गोत्रापत्यं पुमान् ।
4) धर्मज्ञ. — धर्मं जानाति इति ।

3) ಸಮಾಸಗಳು :

1) सुमहाप्राज्ञ. — सुमहान् च असौ प्राज्ञः च । (ಕರ್ಮಧಾರಯ)
2) हरिराजाय — हरीणां राजा हरिराजः तस्मै (ಷಷ್ಠೀ ತತ್ಪುರುಷ)
3) हर्षव्याकुललोचनः — हर्षेण व्याकुले लोचने यस्य सः (ತೃತೀಯಾ ತತ್ಪುರುಷ, ಬಹುವ್ರೀಹಿ)
4) उद्भ्रान्तचेतनः — उद्भ्रान्तं चेतनं यस्य सः (ಬಹುವ್ರೀಹಿ)
5) धर्मविनीतः — धर्मेण विनीतः (ತೃತೀಯಾ ತತ್ಪುರುಷ)

4) ವ್ಯಾಕರಣವಿಶೇಷ :

1) हरिराजाय — हरीणां राजा हरिराजः, तस्मै ರಾಜನ್ ಶಬ್ದವು ಸಮಾಸಾಂತ್ಯದಲ್ಲಿ ಅಕಾರಾಂತವಾಗುತ್ತದೆ ಇದೇ ರೀತಿ कपिराज, अङ्गराज, धर्मराज, अधिराज ಎಂಬುವುಗಳನ್ನೂ ತಿಳಿಯಬೇಕು. 2) लक्ष्मणेन सह– 'ಸಹಯೋಗೇ ತೃತೀಯಾ' ಎಂಬುದನ್ನು ಗಮನಿಸಬೇಕು.

5) ರೂಪ ಗುರುತಿಸುವುದು : 1) परित्यज्य- ಪರಿ + ತ್ಯಜ್ + ಲ್ಯಪ್. 2) प्रगृह्य- ಪ್ರ + ಗ್ರಹ್ + ಲ್ಯಪ್. संप्रहृष्ट- ಸಮ್ + ಪ್ರ + ಹೃಷ್ + ಕ್ತ.

6. ಕಠಿಣ ಪದಗಳ ಅರ್ಥ :

मारुतात्मज:-ಹನುಮಂತ हरिराज-ಕಪಿರಾಜ कुञ्जर:-ಆನೆ निदेश:-ಆಜ್ಞೆ पावक-ಬೆಂಕಿ सूर्यसंकाश-ಸೂರ್ಯಸದೃಶ संप्रहृष्ट -ಸಂತೋಷಗೊಂಡ.

## ಪಾಠ 10 अभिमन्योः प्रतिज्ञा

### [ ಅಭಿಮನ್ಯುವಿನ ಪ್ರತಿಜ್ಞೆ ]

1. ಅವತರಣಿಕೆ :

ವ್ಯಾಸವಿರಚಿತ ಮಹಾಭಾರತದ ಮಹಾಪಾತ್ರಗಳಲ್ಲಿ ಅಭಿಮನ್ಯು ಒಬ್ಬನು. ಈತನು ಶೌರ್ಯ-ಪರಾಕ್ರಮಗಳಿಗೆ ಹೆಸರಾದವನು. ಈತನು, ದ್ರೋಣವಿರಚಿತ ಚಕ್ರವ್ಯೂಹವನ್ನು ಭೇದಿಸಿ ಅಜರಾಮರವಾದ ಕೀರ್ತಿಯನ್ನು ಸಂಪಾದಿಸಿದ ವೀರ ಬಾಲಕನು. ಇವನು ಚಕ್ರವ್ಯೂಹ ಭೇದನ ಕಾರ್ಯಕ್ಕೆ ಹೊರಟ ವಿವರಣೆ ಇಲ್ಲಿದೆ.

2. ಮಹಾಭಾರತ : (ಟಿಪ್ಪಣಿ)

[ ಸೂಚನೆ : ಮಹಾಭಾರತದ ಪರಿಚಯವನ್ನು ' ಶ್ರೀಕೃಷ್ಣ ದೌತ್ಯಮ್' ಎಂಬ ಭಾಗದಲ್ಲಿ ನೋಡಿರಿ. "महत्वात्"ಎಂದು ಆರಂಭಿಸಿ, ' ಲೋಕವಿಖ್ಯಾತರಾದರು ' ಎಂಬಲ್ಲಿಯವರೆಗೆ ಬರೆಯಬೇಕು.]

3. ಶ್ಲೋಕಗಳ ವಿವರ (ಸಂದರ್ಭ ಸಹಿತ)

ಶ್ಲೋಕ 1, 2 : ದಿವ್ಯದೃಷ್ಟಿಯುಳ್ಳ ಧರ್ಮಾತ್ಮನಾದ ಸಂಜಯನು, ಧೃತರಾಷ್ಟ್ರ ಮಹಾರಾಜನಿಗೆ ದ್ರೋಣವಿರಚಿತ ಚಕ್ರವ್ಯೂಹವೃತ್ತಾಂತ

ವನ್ನು ವಿವರಿಸುತ್ತ ಈ ರೀತಿ ಅಂದನು : "ಎಲೈ ಧೃತರಾಷ್ಟ್ರನೇ, ಕೇಳು : ದ್ರೋಣಾಚಾರ್ಯರು ಕಲ್ಪಿಸಿದ ಭೇದಿಸಲಸಾಧ್ಯವಾದ ಚಕ್ರವ್ಯೂಹ ದಲ್ಲಿ ಇಂದ್ರನಂಥ ಪರಾಕ್ರಮವುಳ್ಳ ಎಲ್ಲ ರಾಜಾಧಿರಾಜರೂ ಪ್ರವೇಶಿಸಿದರು ಅನಂತರ ರೋಮಾಂಚಕಾರಿಯಾದ ಹಾಗೂ ಭಯಂಕರವಾದ ಸಂಗ್ರಾಮ ವು ಕೌರವ-ಪಾಂಡವರ ನಡುವೆ ಆರಂಭವಾಯಿತು."

ಶ್ಲೋಕ 3, 4 : [ದಿವ್ಯ ದೃಷ್ಟಿಯುಳ್ಳ ... ಅಂದನು : ] "ಎಲೈ ಧೃತರಾಷ್ಟ್ರನೆ, ಕೇಳು : ದ್ರೋಣಾಚಾರ್ಯರಿಂದ ನಿರ್ಮಿತವಾದ ಪ್ರವೇಶಿಸ ಲಶಕ್ಯವಾದ ಆ ಚಕ್ರವ್ಯೂಹದಲ್ಲಿ ಭೀಮಸೇನನೇ ಮೊದಲಾದ ಪಾಂಡವ ರೂ ಭಾಗವಹಿಸಿ, ದ್ರೋಣಾಚಾರ್ಯರಿಂದ ಪ್ರಯೋಗಿಸಲ್ಪಡುತ್ತಿದ್ದ ಶರಸಂಕುಲದಿಂದ ಪೀಡಿತರಾಗಿ ಯಾರೊಬ್ಬರೂ ಅವರನ್ನು ಎದುರಿಸಿ ನಿಲ್ಲಲು ಅಸಮರ್ಥರಾಗಿಹೋದರು. ಆಗ ಯುಧಿಷ್ಠಿರನು ಚಿಂತಾಕ್ರಾಂತ ನಾದನು."

ಶ್ಲೋಕ 5, 6 : [ದಿವ್ಯ ದೃಷ್ಟಿಯುಳ್ಳ .... ಅಂದನು]
"ಎಲೈ ಧೃತರಾಷ್ಟ್ರನೇ, ಕೇಳು : ದ್ರೋಣಾಚಾರ್ಯರನ್ನು ಎದುರಿಸಲು ಅಸಾಧ್ಯವೆಂದು ಭಾವಿಸಿದ ಯುಧಿಷ್ಠಿರನು, ಶ್ರೀಕೃಷ್ಣನ ಪರಾಕ್ರಮಕ್ಕೆ ಕಡಿಮೆಯಿಲ್ಲದ, ಅರ್ಜುನನಿಗಿಂತಲೂ ಅತಿಶಯವಾದ ಪರಾಕ್ರಮವುಳ್ಳ, ಎಲ್ಲ ವೀರರನ್ನೂ ನಿಗ್ರಹಿಸಲು ಸಮರ್ಥನಾದ ಅಭಿಮನ್ಯುವನ್ನು ಕುರಿತು ನುಡಿದನು."

ಶ್ಲೋಕ 7, 8, 9, 10 : [ದಿವ್ಯದೃಷ್ಟಿಯುಳ್ಳ .... ಅಂದನು.]
"ಎಲೈ ಧೃತರಾಷ್ಟ್ರನೇ ಕೇಳು : ಯುಧಿಷ್ಠಿರನು, ಸುಭದ್ರಾತನಯನಾದ ವೀರ ಅಭಿಮನ್ಯುವೇ ! ನಾನು ಅರ್ಜುನನ ಪರಾಕ್ರಮವನ್ನು ಹೀಗಳೆಯು ತ್ತಿಲ್ಲ. ಈ ಚಕ್ರವ್ಯೂಹವನ್ನು ಭೇದಿಸಲು ನಾವು ಎಷ್ಟು ಪ್ರಯತ್ನಿಸಿದರೂ ಸಾಧ್ಯವಾಗುತ್ತಿಲ್ಲವು. ನೀನಾಗಲೀ ಅರ್ಜುನನಾಗಲೀ ಕೃಷ್ಣನಾಗಲೀ, ಪ್ರದ್ಯುಮ್ನನಾಗಲೀ ಬಿಟ್ಟು ಮತ್ತಾವ ಐದನೆಯವನಿಂದಲೂ ಸಾಧ್ಯವಾಗ ದೆಂದು ನನ್ನ ಭಾವನೆಯು."

ಶ್ಲೋಕ 11, 12 : [ ದಿವ್ಯ ದೃಷ್ಟಿಯುಳ್ಳ ... ಅಂದನು : ]

" ಎಲೈ ಧೃತರಾಷ್ಟ್ರನೇ, ಕೇಳು : ಧರ್ಮರಾಜನು, ಅಭಿಮನ್ಯುವಿಗೆ ಹೇಳಿದನು : ' ಅಭಿಮನ್ಯುವೆ, ನಿನ್ನ ತಂದೆಗಳು (ಪಾಂಡವರೈವರು ಎಂದರ್ಥ) ಸೋದರಮಾವಂದಿರು, ಪಾಂಡವಪಕ್ಷಿಗಳು — ಈ ಎಲ್ಲರನ್ನೂ ಕೂಡಿದ ಸೈನ್ಯವನ್ನು ನೀದಿಸಿಯಾನು. ಅವನು, ಸಮಸಪ್ತಕರೊಡನೆ ಯುದ್ಧಕ್ಕೆ ಹೋಗಿರುವನು. ಅವನಿಲ್ಲದೇ ಇರುವಾಗ ನಾವು ಸುಮ್ಮನೇ ಕೈ ಕಟ್ಟಿ ಕುಳಿತುಕೊಳ್ಳುವುದು ಯೋಗ್ಯವಲ್ಲ. ನೀನು, ಕೂಡಲೇ ಅಸ್ತ್ರಶಸ್ತ್ರಧರಿಸಿ ದ್ರೋಣರ ಚಕ್ರವ್ಯೂಹವನ್ನು ಭೇದಿಸಲು ಸಿದ್ಧನಾಗು."

ಸಂ. ವಾಕ್ಯ : ' धनञ्जयो हि नस्तात गर्हयेदेत्य संयुगात् । '

ಶ್ಲೋಕ 13, 14 : [ ದಿವ್ಯ ದೃಷ್ಟಿಯುಳ್ಳ .... ಅಂದನು : ]

" ಎಲೈ ಧೃತರಾಷ್ಟ್ರನೇ ಕೇಳು : ಅಭಿಮನ್ಯುವು, ದೊಡ್ಡಪ್ಪ ಯುಧಿಷ್ಠಿರನ ಮಾತನ್ನು ಕೇಳಿ ಹೀಗೆ ಹೇಳಿದನು– ' ದ್ರೋಣಾಚಾರ್ಯರ ಭಯಂಕರವಾದ ಭೇದಿಸಲಸಾಧ್ಯವಾದ ಈ ಚಕ್ರವ್ಯೂಹವನ್ನು ಸ್ವಲ್ಪವೂ ತಡೆಯಿಲ್ಲದೆ ತಂದೆ ಅರ್ಜುನನ* ಗೆಲುವಿಗಾಗಿ, ತಂದೆಯಿಂದ ಉಪದೇಶಿಸಲ್ಪಟ್ಟ ಬೋಧನರೀತಿಯಲ್ಲಿ ಚಕ್ರವ್ಯೂಹವನ್ನು ಪ್ರವೇಶಿಸುವೆನು. ಯಾವ ವಿಪತ್ತಿಗೂ ಹಣಿದು ಹಿಂದಿರುಗುವುದಿಲ್ಲ."

ಸಂ. ವಾಕ್ಯ : ' नोत्सहे हि विनिर्गन्तुमहं कस्यांचिदापदि । '

ಶ್ಲೋಕ 15, 16 : [ ದಿವ್ಯ ದೃಷ್ಟಿಯುಳ್ಳ —ಅಂದನು]

" ಎಲೈ ಧೃತರಾಷ್ಟ್ರನೆ, ಕೇಳು : ಯುಧಿಷ್ಠಿರನು, ಅಭಿಮನ್ಯುವಿನ ವೀರವಾಣಿಯನ್ನು ಕೇಳಿ, ' ಅಭಿಮನ್ಯುವೆ, ಯುದ್ಧದಲ್ಲಿ ನೀನು ಶ್ರೇಷ್ಠನು. ಈ ಚಕ್ರವ್ಯೂಹವನ್ನು ಭೇದಿಸಲು ಹೊರಡು. ನಮಗೆ ದಾರಿ ತೋರು ; ಬಾಲಕನೆ, ನಿನ್ನನ್ನು ಅನುಸರಿಸಿ ನಾವು ನುಗ್ಗುತ್ತೇವೆ. ಯುದ್ಧದಲ್ಲಿ ಅರ್ಜುನನಿಗೆ ನೀನು ಸಮಾನನೆಂದು ಭಾವಿಸಿ ನಾವು ನಿನ್ನನ್ನು ಹಿಂಬಾಲಿಸುತ್ತೇವೆ ಎಂದನು."

ಶ್ಲೋಕ 17, 18 : [ದಿವ್ಯದೃಷ್ಟಿಯುಳ್ಳ ... ಅಂದನು.]

" ಎಲೈ ಧೃತರಾಷ್ಟ್ರನೆ, ಕೇಳು : ಭೀಮಸೇನನು, ಯುಧಿಷ್ಠಿರನ ಮಾತಿನ ಜಾಡಿನಲ್ಲಿ ಅಭಿಮನ್ಯುವನ್ನು ಕುರಿತು ಅಂದನು–– ಅಭಿಮನ್ಯುವೆ, ನಾನು ನಿನ್ನನ್ನು ಅನುಸರಿಸುವೆನು. ಧೃಷ್ಟದ್ಯುಮ್ನ, ಸಾತ್ಯಕಿ, ಪಾಂಚಾಲರು, ಕೇಕಯರು, ಮತ್ಸ್ಯರು ಈ ಎಲ್ಲರೂ ನಿನ್ನ ಹಿಂದೆಯೇ ನುಗ್ಗಿ ಪ್ರಬಲ ಶತ್ರುಗಳನ್ನು ಸಂಹರಿಸಲೆತ್ನಿಸುತ್ತಾರೆ."

ಸಂ. ವಾಕ್ಯ : 'वयं प्रध्वंसयिष्यामो निघ्नमाना वरान् वरान् ।'

ಶ್ಲೋಕ 19, 20 : [ದಿವ್ಯ ದೃಷ್ಟಿಯುಳ್ಳ –– ಅಂದನು]

" ಎಲೈ ಧೃತರಾಷ್ಟ್ರನೆ, ಕೇಳು : ಭೀಮನ ವಾಣಿಯನ್ನು ಕೇಳಿದ ಅಭಿಮನ್ಯು, ಹೀಗೆ ಹೇಳಿದನು –– 'ದೊಡ್ಡಪ್ಪ, ನೀವು ಚಿಂತಿಸಬೇಡಿರಿ. ಕೋಪಗೊಂಡ ಪತಂಗದ ಹುಳು (ಶಲಭ), ಧಗಧಗಿಸುವ ಜ್ವಾಲೆಯನ್ನು ಪ್ರವೇಶಿಸುವಂತೆ, ದ್ರೋಣನಿರ್ಮಿತ ಈ ದುರ್ಭೇದ್ಯವಾದ ಚಕ್ರವ್ಯೂಹವನ್ನು ಪ್ರವೇಶಿಸುವೆನು. ಯಾದವ-ಪಾಂಡವ ವಂಶಗಳಿಗೂ, ಸೋದರ ಮಾವ ಕೃಷ್ಣನಿಗೂ, ತಂದೆ ಅರ್ಜುನನಿಗೂ ಪ್ರಿಯವೆನಿಸುವ ಶುಭಕಾರ್ಯವನ್ನು ಮಾಡಿ ಮುಗಿಸುತ್ತೇನೆ.' "

ಸಂ. ವಾಕ್ಯ : 1) 'पतङ्ग इव सङ्क्रुद्धो ज्वलितं जातवेदसम् ।' 2) 'मातुलस्य च यत्प्रीतिं करिष्यति पितुश्च मे ।'

ಶ್ಲೋಕ 21, 22, 23 : [ದಿವ್ಯದೃಷ್ಟಿಯುಳ್ಳ –– ಅಂದನು.]

" ಎಲೈ ಧೃತರಾಷ್ಟ್ರನೆ, ಕೇಳು : ಅಭಿಮನ್ಯುವು, ಯುಧಿಷ್ಠಿರ-ಭೀಮರಿಗೆ ಹೀಗೆ ಹೇಳಿದನು : 'ಬಾಲಕನಾದ ನನ್ನಿಂದ ಸಂಹಾರ ಮಾಡಲ್ಪಡತಕ್ಕ ಈ ಶತ್ರುಸಮೂಹವನ್ನು ನೋಡಿ 'ನಾನು ಅರ್ಜುನಪುತ್ರನಲ್ಲವೆ !'– 'ಸುಭದ್ರಾತನಯನಲ್ಲವೆ !' ಎಂಬುದನ್ನು ತಿಳಿಯಿರಿ. ಯಾವೊಬ್ಬ ಶತ್ರುವೂ ನನ್ನ ಹೊಡೆತದಿಂದ ತಪ್ಪಿಸಿಕೊಂಡು ಹೋಗಲಾರನು. ಈ ಕೌರವ ಪಕ್ಷದ ರಾಜಸಮೂಹವನ್ನು ಅಷ್ಟದಿಕ್ಕುಗಳ ಅಧಿದೇವತೆಗಳಿಗೆ

ಬಲಿಯರ್ಪಿಸುವೆನು. "

ಸಂ. ವಾಕ್ಯ : 'नाहं पार्थेन जातः स्यां न च जातः सुभद्रया ।'

ಶ್ಲೋಕ 24, 25 : [ ದಿವ್ಯ ದೃಷ್ಟಿಯುಳ್ಳ ... ಅಂದನು ]

" ಎಲೈ ಧೃತರಾಷ್ಟ್ರನೆ, ಕೇಳು : ಅಭಿಮನ್ಯುವಿನ ವೀರೋಚಿತವಾಣಿಯನ್ನು ಕೇಳಿದ ಯುಧಿಷ್ಠಿರನು ಹರ್ಷಮಾನಸನಾಗಿ ಹೀಗೆಂದನು– ' ಎಲೈ ವೀರ ಶಿಶುವೆ, ನಿನ್ನ ಪರಾಕ್ರಮವು ವರ್ಧಿಸಲಿ. ಯಾರಿಂದಲೂ ಭೇದಿಸಲಸಾಧ್ಯವಾದ ಸಿದ್ಧರು, ಈಶನು, ವಾಯುವು, ವಸುಗಳು, ಅಗ್ನಿಯು, ಸೂರ್ಯನು ಇವರಂತೆ ಪರಾಕ್ರಮವುಳ್ಳ ಪುರುಷಶ್ರೇಷ್ಠನಾದ ದ್ರೋಣ ನಿರ್ಮಿತ ಚಕ್ರವ್ಯೂಹವನ್ನು ಭೇದಿಸಲು ಉತ್ಸುಕನಾಗಿರುವ ನಿನಗೆ ಮಂಗಳವುಂಟಾಗಲಿ. ಯುದ್ಧಕ್ಕೆ ಹೋಗಿ ಬಾ."

ಸಂ. ವಾಕ್ಯ : ' बलं सौभद्र वर्धताम् ।'

ಶ್ಲೋಕ 26 : [ ದಿವ್ಯದೃಷ್ಟಿಯುಳ್ಳ ... ಅಂದನು.]

" ಎಲೈ ಧೃತರಾಷ್ಟ್ರನೆ, ಕೇಳು : ' ಮಹಾಬಲ-ಪರಾಕ್ರಮಶಾಲಿಯಾದ ಬಾಲಕ ಅಭಿಮನ್ಯುವು ' ದ್ರೋಣನಿರ್ಮಿತ ಚಕ್ರವ್ಯೂಹಕ್ಕೆ ಎದುರಾಗಿ ರಥವನ್ನು ನಡೆಸೆಂದು ಸಾರಥಿಗೆ ಆದೇಶವಿತ್ತನು."

4. ಪ್ರಶ್ನೋತ್ತರ :

1) ಅಭಿಮನ್ಯುವಿನ ಪರಾಕ್ರಮವು ಅವನ ಮಾತುಗಳಿಂದ ಹೇಗೆ ಅಭಿವ್ಯಕ್ತವಾಗಿದೆ ?

2) ಚಕ್ರವ್ಯೂಹಭೇದನಕಾರ್ಯವನ್ನು ಕೈಗೊಳ್ಳೆಂದುಯುಧಿಷ್ಠಿರನು ಹೇಳಿದುದಕ್ಕೆ ಅಭಿಮನ್ಯು ಹೇಳಿದ ಶೌರ್ಯದ ನುಡಿಗಳೇನು ?

(ಸೂಚನೆ : ಶ್ಲೋಕಗಳ ಭಾವವಿವರಣೆಯನ್ನು ನೋಡಿರಿ)

5. ವ್ಯಾಕರಣಾಂಶಗಳು :

1) ಕ್ರಿಯಾರೂಪಗಳು : 1) प्रववृते – ಪ್ರ + ವೃತ್ ಧಾತು, ಲಿಟ್ ಲಕಾರ, ಪ್ರಥಮ ಪುರುಷ, ಏಕವಚನ. 2) समभ्यवर्तत –

ಸಮ್ + ಅಭಿ + ವೃತ್ ಧಾತು, ಲಙ್ ಲಕಾರ, ಪ್ರಥಮ ಪುರುಷ, ಬಹುವಚನ 3) शेकुः – ಶಕ್ ಧಾತು, ಲಿಟ್ ಲಕಾರ, ಪ್ರಥಮ ಪುರುಷ, ಬಹುವಚನ. 4) अपश्याम – ದೃಶ್ ಧಾತು, ಲಙ್ ಲಕಾರ, ಉತ್ತಮ ಪುರುಷ, ಬಹುವಚನ. 5) समवासृजत् – ಸಮ್ + ಅವ + ಸೃಜ್ ಧಾತು, ಲಙ್ ಲಕಾರ, ಪ್ರಥಮ ಪುರುಷ ಏಕವಚನ. 6) उपपद्येत – ಉಪ + ಪದ್ ಧಾತು, ಲಟ್ ಲಕಾರ, ಪ್ರಥಮ ಪುರುಷ, ಏಕವಚನ. 7) विशातय – ವಿ + ಶೋ ಧಾತು, ಣಿಜಂತ, ಲೋಟ್ ಲಕಾರ, ಮಧ್ಯಮ ಪುರುಷ, ಏಕವಚನ. 8) अवगाहे – ಅವ + ಗಾಹ್ ಧಾತು, ಲಟ್ ಲಕಾರ, ಉತ್ತಮ ಪುರುಷ, ಏಕವಚನ. 9) भिन्धि – ಭಿದ್ ಧಾತು, ಲೋಟ್ ಲಕಾರ, ಮಧ್ಯಮ ಪುರುಷ, ಏಕವಚನ. 10) प्रवेक्ष्यामि – ಪ್ರ + ವಿಶ್ ಧಾತು, ಲೃಟ್ ಲಕಾರ, ಉತ್ತಮ ಪುರುಷ, ಏಕವಚನ. 11) द्रक्ष्यन्ति – ದೃಶ್ ಧಾತು, ಲೃಟ್ ಲಕಾರ, ಪ್ರಥಮ ಪುರುಷ, ಏಕವಚನ. 12) वर्धतां – ವೃಧ್ ಧಾತು, ಲೋಟ್ ಲಕಾರ, ಪ್ರಥಮ ಪುರುಷ, ಏಕವಚನ.

2) ಸಮಾಸಗಳು :

1) तावकानां — तव इमे तावकाः, तेषाम्
(ಸಂಬಂಧಾರ್ಥದಲ್ಲಿ ಕಪ್ ಪ್ರತ್ಯಯ)

2) परवीरघ्नम् – परवीरान् हन्ति इति परवीरघ्नः तम् (ದ್ವಿತೀಯಾ ತತ್ಪುರುಷ)

3) जातवेदसम् — जातवेदाः अग्निः तम्
(ಜಾತವೇದಸ್ ಶಬ್ದಕ್ಕೆ ದ್ವಿತೀಯಾವಿಭಕ್ತಿ ಏಕವಚನದಲ್ಲಿ अम् ಪ್ರತ್ಯಯ)

4) वंशयोर्द्वयोः — मातृवंशस्य पितृवंशस्य च
(ದ್ವಿ ಶಬ್ದಕ್ಕೆ ವಿವರಣೆ ಇದೆ. ರುತ್ವಸಂಧಿ)

5) मातुलस्य— मातुः भ्राता मातुलः, तस्य
(ಮಾತುಲ ಶಬ್ದದ ಷಷ್ಠೀ ವಿಭಕ್ತಿ ಏಕವಚನ)

3) ರೂಪಗುರ್ತಿಸು : 1) याचताम् – ಯಾಚ್ ಧಾತು, ಶತೃ ಪ್ರತ್ಯಯಾಂತ ಶಬ್ದ, ಷಷ್ಠೀ ವಿಭಕ್ತಿ ಬಹುವಚನ.

2) प्रणिधाय – ಪ್ರ+ನಿ+ಧಾ ಧಾತು, ಲ್ಯಬಂತಾವ್ಯಯ.

4) ಏಕಪದ :

सौभद्रं— सुभद्रायाः अपत्यं पुमान् .

6. ಕಠಿಣ ಪದಗಳ ಅರ್ಥ :

शक्रोपम – ಇಂದ್ರನಂತೆ भारद्वाजेन – ದ್ರೋಣನಿಂದ सकृत्– ಒಮ್ಮೆ प्रतिवारणं–ಪ್ರತಿರೋಧ संयुगात्–ಯುದ್ಧದಿಂದ जातवेदसं – ಅಗ್ನಿಯನ್ನು मातुलस्य–ಸೋದರಮಾವನ यन्तारं – ಸಾರಥಿಯನ್ನು

## ಪಾಠ : 11 रत्नं समागच्छति काञ्चनेन

### [ ರತ್ನವು ಚಿನ್ನವನ್ನು ಸೇರುತ್ತದೆ ]

1. ಅವತರಣಿಕೆ :

ಕಾಳಿದಾಸ ಮಹಾಕವಿಯು, 'ರಘುವಂಶ' ಕಾವ್ಯದಲ್ಲಿ, ಇಂದುಮತಿಯ ವಿವಾಹವನ್ನು ಬಹು ಚೇತೋಹಾರಿಯಾಗಿ ಚಿತ್ರಿಸಿದ್ದಾನೆ. ಈ ವರ್ಣನೆಯು ಅಧ್ಯಯನಾರ್ಹವಾಗಿದೆ.

2. ಟಿಪ್ಪಣಿ ; ಕಾಳಿದಾಸ :

ಕಾಳಿದಾಸನ ದೇಶ-ಕಾಲ-ಕೃತಿ ಪರಿಚಯ :

"कालिदास गिरां सारं कालिदासः सरस्वती"

[ 'ಕಾಳಿದಾಸನ ವಾಣೀ–ವೈವಿಧ್ಯವನ್ನು ಕಾಳಿದಾಸ ಹಾಗೂ ಸರಸ್ವತಿ ಮಾತ್ರ ಅರ್ಥವಿಸಲು ಸಮರ್ಥರು' — ಮಲ್ಲಿನಾಥ ]

"ಕವಿಪ್ರತಿಭೆ, ರಚನಾ ಸೌಂದರ್ಯ – ಈ ಎರಡೂ ಒಂದೆಡೆಯಲ್ಲಿ

ಸಂಗಮವಾಗಿರುವುದು ಕಾಳಿದಾಸನ ಕಾವ್ಯಗಳಲ್ಲಿ ಮಾತ್ರ. ರಸಭಾವಗಳು ಸಹಜವಾಗಿಯೇ ಮೂಡಿಬರಲನುಕೂಲವಾದ ಮಧುರ ಲಲಿತ ಭಾಷೆಯಲ್ಲಿ ಸರಳ ಶೈಲಿಯಲ್ಲಿ ಕಾವ್ಯ-ನಾಟಕ ರಚಿಸುವ ಅಪೂರ್ವ ಶಕ್ತಿ ಕಾಳಿದಾಸನೊಬ್ಬನದೇ ಎನ್ನಬಹುದು."

– 'ಸಂಸ್ಕೃತ ನಾಟಕ'

ವಿಶ್ವಸಾಹಿತ್ಯಾಕಾಶದಲ್ಲಿ : ಕವಿಕುಲಗುರು ಕಾಳಿದಾಸನನ್ನು 'ಸಂಸ್ಕೃತ ಸಾರಸ್ವತ ಪ್ರಪಂಚದಲ್ಲಿ ಸಾಹಿತ್ಯ ಕಲೆಯ ಪರಿಪೂರ್ಣತೆಯ ಪ್ರತಿನಿಧಿ' ಎಂದು ಆನಂದವರ್ಧನನು ಹೇಳಿದ್ದಾನೆ. ಕಾಳಿದಾಸನು ಕವಿತಾ ಕಾಮಿನಿಯ ವಿಲಾಸವೆಂದು ಜಯದೇವನು ಹೊಗಳಿದ್ದಾನೆ. ವಿಮರ್ಶಕರು ಭಾರತದ ಷೇಕ್ಸ್‌ಪಿಯರ್ ಎಂದೂ ಹೇಳಿದ್ದಾರೆ. ಮಹಾಕವಿ ಗಯಟೆಯು "ಸ್ವರ್ಗ-ಭೂಮಿಗಳ ಸಂಗಮವನ್ನು ಒಂದು ಶಬ್ದದಲ್ಲಿ ಹೇಳುವುದಾದಲ್ಲಿ 'ಶಾಕುಂತಲ'ವೆನ್ನಬಹುದು" ಎಂದು ಹೇಳಿದ್ದಾನೆ. 'ಉಪಮಾ ಕಾಳಿದಾಸಸ್ಯ' ಎಂಬುದು ಲೋಕಪ್ರಸಿದ್ಧ ಉಕ್ತಿಯಾಗಿದೆ. ಇಂತು ಕಾಳಿದಾಸನು ವಿಶ್ವಸಾಹಿತ್ಯಾಕಾಶದ ಧ್ರುವತಾರೆಯಾಗಿದ್ದಾನೆ.

ಜೀವನ–ವ್ಯಕ್ತಿತ್ವ : ಜನಶ್ರುತಿಯ ಪ್ರಕಾರ ದಡ್ಡನಾಗಿದ್ದ ಕಾಳಿದಾಸನು ಕಾಳೀಕೃಪೆಯಿಂದ ಕಾಳಿದಾಸನಾದನೆಂದು ಪ್ರತೀತಿಯಿದೆ. ಈತನು ಮಾನವೀ ಜಗತ್ತಿಗಿತ್ತ ಜೀವನ ಸಂದೇಶ ಭಾರತ ಸಂಸ್ಕೃತಿಯ ನವನೀತವೇ ಸರಿ. ಈತನ ಪ್ರಸನ್ನ ಸುಕುಮಾರ ಮಧುರ ಮನೋಧರ್ಮದಲ್ಲಿ ಬಾಳಿನ ಗೋಳಿಗೆ ತಾಣವಿರಲಿಲ್ಲ.

ದೇಶ-ಕಾಲ : ಕಾಳಿದಾಸನನ್ನು ಉಜ್ಜಯಿನಿಯ ವಿಕ್ರಮಾದಿತ್ಯನ ಆಸ್ಥಾನದ 'ನವರತ್ನ'ಗಳಲ್ಲೊಬ್ಬನೆಂದು ಹೇಳಲಾಗಿದೆ. ಬಲ್ಲಾಳಸೇನನ ಭೋಜಪ್ರಬಂಧದಲ್ಲಿ ಈತನನ್ನು ಭಾರವಿ, ಭವಭೂತಿ, ದಂಡಿಗಳ ಸಮಕಾಲೀನನೆಂದು ಹೇಳಲಾಗಿದೆ. ಕಾಳಿದಾಸನು ಉಜ್ಜಯಿನಿಯ ವಿಷಯದಲ್ಲಿ ಅಭಿಮಾನವನ್ನು ಪ್ರಕಟಿಸಿರುವುದರಿಂದ ಉಜ್ಜಯಿನಿಯೇ ಕವಿಯ ಜನ್ಮಸ್ಥಾನವೆಂದು ಹೇಳಲಾಗಿದೆ. ಕಾಶ್ಮೀರದ ಕೇಸರಪುಷ್ಪವನ್ನು ವರ್ಣಿಸಿರುವುದರಿಂದ ಕಾಶ್ಮೀರದಲ್ಲಿ ವಾಸಮಾಡಿಕೊಂಡಿರಬಹುದೆಂದು ಊಹಿಸಲಾಗಿದೆ

ಕಾಳಿದಾಸನ ಕಾಲ ಸಿ. ವಿ. ವೈದ್ಯರ ಅಭಿಪ್ರಾಯದಂತೆ ಕ್ರಿ. ಪೂ. 1 ನೇ ಶತಕ, ಮಾಕ್ಸ್‌ಮುಲರನ ಹೇಳಿಕೆಯಂತೆ ಕ್ರಿ. ಶ. 6 ನೆಯ ಶತಮಾನ, ಡಾ॥ ಕೀಥ್ ಅವರ ಅಭಿಮತದಂತೆ ಕ್ರಿ. ಶ 4 ನೇ ಶತಕ, ಬಹು ವಿದ್ವಾಂಸರ ಅಭಿಪ್ರಾಯದಂತೆ ಕಾಳಿದಾಸನು ಕ್ರಿ. ಶ. 4 ನೇ ಶತಮಾನದ ಕೊನೆಯ ಭಾಗ, 5 ನೇ ಶತಮಾನದ ಆದಿಭಾಗವೆನ್ನಬಹುದು.

ಕೃತಿಗಳು : ಈ ಮುಂದಿನ ಕೃತಿಗಳನ್ನು ಕಾಳಿದಾಸವಿರಚಿತ ಕೃತಿಗಳೆಂದು ಹೆಸರಿಸಲಾಗಿದೆ.

1. ನಾಟಕಗಳು : 1) ಮಾಳವಿಕಾಗ್ನಿಮಿತ್ರ
   2) ವಿಕ್ರಮೋರ್ವಶೀಯ. 3) ಅಭಿಜ್ಞಾನ ಶಾಕುಂತಲ.
2. ಭಾವಕಾವ್ಯಗಳು :
   1) ಋತುಸಂಹಾರ 2) ಮೇಘದೂತ
3. ಮಹಾಕಾವ್ಯಗಳು :
   1) ಕುಮಾರ ಸಂಭವ 2) ರಘುವಂಶ

ಪ್ರಕೃತ ಪಠ್ಯಭಾಗ : ಡಾ॥ ರೈಡರ್ ಹೇಳುವಂತೆ ಕುಮಾರ ಸಂಭವದ 'ತಪಃಫಲಮ್', ರಘುವಂಶದ 'ಇಂದುಮತಿ ವಿವಾಹ' ವು ರಸಿಕವಾಚಕರನ್ನು ಮಂತ್ರಮುಗ್ಧಗೊಳಿಸುವ ಭಾಗಗಳಾಗಿವೆ.

3. ಶ್ಲೋಕಗಳ ವಿವರ (ಸಂದರ್ಭ ವಾಕ್ಯ ಸಹಿತ) :

[ಸೂಚನೆ : ಸಂದರ್ಭವಾಕ್ಯವನ್ನು ಬರೆಯುವ ಮೊದಲು ಈ ಅಂಶವನ್ನು ಬರೆಯಿರಿ : ಈ ವಾಕ್ಯಾಂಶವನ್ನು, ಕಾಳಿದಾಸ ಮಹಾಕವಿ ವಿರಚಿತ 'ರಘುವಂಶ' ಕಾವ್ಯದ 'ಇಂದುಮತಿ ಪರಿಣಯ' ಭಾಗದಿಂದ ಆರಿಸಿಕೊಡಲಾಗಿದೆ.]

ಶ್ಲೋಕ 1 : ಪತಿಯನ್ನು ವರಿಸುವ ಆ ಇಂದುಮತಿಯು ರಾತ್ರಿಯಲ್ಲಿ ಸಂಚಾರಶೀಲವಾದ ದೀಪದ ಜ್ಯೋತಿಯಂತೆ ಯಾವ ಯಾವ ರಾಜನನ್ನು ಬಿಟ್ಟು ಮುಂದೆ ಹೋಗುತ್ತಿದ್ದಳೋ ಆಯಾ ರಾಜನು ರಾಜಮಾರ್ಗದಲ್ಲಿನ 'ಅಟ್ಟ' ಎಂಬ ಜಾತಿಯ ಗೃಹ (ಮಹಡಿಮನೆ) ದಂತೆ ಕಳೆಗುಂದು

ವಿಶೇ(ಕತ್ತಲೆ ಕವಿಯುವಿಕೆ)ಯನ್ನು ಹೊಂದುತ್ತಿದ್ದನು.

ಶ್ಲೋಕ 2 : ಇಂದುಮತಿಯು ಹತ್ತಿರ ನಿಲ್ಲಲು ರಘುವಂಶಾ-ರಾಜನ ಮಗನಾದ ಅಜನು ನನ್ನನ್ನು ವರಿಸಿಯಾಳೋ ಇಲ್ಲವೋ ಎಂದು ಕಳವಳಗೊಂಡವನಾದನು. ಆದರೆ ಈ ಅಜನ ಬಲಗಡೆಯ ತೋಳು ಕೇಯೂರ ಎಂಬ ಆಭರಣದ ಸ್ಥಾನವಲ್ಲಿ ಉಂಟಾದ ಅದಿರುವಿಕೆಯು ಸಂದೇಹವನ್ನು ಪರಿಹರಿಸಿತು.

ಸಂ. ವಾಕ್ಯ : 'ತಾಮೇತರ: .... ನ್ನೈನೋಢ।'

ಶ್ಲೋಕ 3 : ರಾಜಕುಮಾರಿ ಇಂದುಮತಿಯು ಎಲ್ಲ ಅವಯವಗಳಲ್ಲೂ ದೋಷವಿಲ್ಲದವನಾದ ಅಜನನ್ನು ಬಿಟ್ಟು ಬೇರೆ ರಾಜನ ಬಳಿಗೆ ಹೋಗುವುದರಿಂದ ನಿವೃತ್ತಳಾದಳು. ದುಂಬಿಯು ಹಿಂಡು ಹೂಬಿಟ್ಟಿರುವ ಮಾವಿನ ಮರವನ್ನು ಸೇರಿದ ಮೇಲೆ ಬೇರೆ ವೃಕ್ಷವನ್ನು ಅಪೇಕ್ಷಿಸುವುದಿಲ್ಲವಷ್ಟೇ !

ಸಂ. ವಾಕ್ಯ : 'ನಹಿ ಪ್ರಫುಲ್ಲं .... षट्पदाली ।'

ಶ್ಲೋಕ 4 : ಆ ಅಜನಲ್ಲಿ ನೆಲೆಸಿದ ಮನೋವೃತ್ತಿಯುಳ್ಳ ಚಂದ್ರನ ಪ್ರಭೆಯಂತೆ ಪ್ರಭೆಯುಳ್ಳ ಇಂದುಮತಿಯನ್ನು ನೋಡಿ ಮಾತಿನಲ್ಲಿ ಪೂರ್ವಾಪರ ವಿವೇಕವುಳ್ಳ ಸುನಂದೆಯು ಮುಂದೆ ಹೇಳುವ ವಿಸ್ತಾರದಿಂದ ಕೂಡಿದ ಮಾತನ್ನು ಹೇಳಲು ಪ್ರಾರಂಭಿಸಿದಳು.

ಶ್ಲೋಕ 5 : ಸುನಂದೆಯು ಈ ರೀತಿ ಹೇಳಿದಳು. ಮನುಪುತ್ರನಾದ ಇಕ್ಷ್ವಾಕುವಿನ ವಂಶದವನೂ ರಾಜರ ಮಧ್ಯೆ ಶ್ರೇಷ್ಠನಾದವನೂ ಪ್ರಖ್ಯಾತ ಗುಣಗಳುಳ್ಳವನೂ ಕಕುತ್ಸ್ಥನೆಂದು ಪ್ರಸಿದ್ಧನೂ ಆದ ಒಬ್ಬ ರಾಜ ಇದ್ದನು. ಕಕುತ್ಸ್ಥನಿಂದ ಮೊದಲಾಗಿ ಉನ್ನತವಾದ ಆಶಯಗಳುಳ್ಳ ಉತ್ತರಕೋಸಲದ ದಿಲೀಪನೇ ಮೊದಲಾದ ರಾಜರು ಪ್ರಶಸ್ತವಾದ ಕಾಕುತ್ಸ್ಥ ಎಂಬ ಹೆಸರನ್ನು ಧರಿಸಿದರು.

ಶ್ಲೋಕ 6 : ಈ ಕಕುತ್ಸ್ಥನು ಯುದ್ಧದಲ್ಲಿ ದೊಡ್ಡ ಗೂಳಿಯ

ರೂಪವನ್ನು ತಾಳಿದ್ದ ದೇವೇಂದ್ರನನ್ನು ಹತ್ತಿ ಸವಾರಿ ಮಾಡುತ್ತಾ ಈಶ್ವರನ ಲೀಲೆಯನ್ನು ಹೊಂದಿದವನಾಗಿ ಬಾಣಗಳಿಂದ ರಾಕ್ಷಸರ ಸ್ತ್ರೀಯರ ಗಂಡಸ್ಥಳಗಳನ್ನು ನಿವೃತ್ತಿಗೊಳಿಸಿದ ಪತ್ರಲೇಖಾಲಂಕಾರವುಳ್ಳವುಗಳನ್ನಾಗಿ ಮಾಡಿದನು.

ಸಂ. ವಾಕ್ಯ : 'चकार बाणै .... .... पत्रलेखाः ।'

ಶ್ಲೋಕ 7 : ಕಕುತ್ಸ್ಥನು ಐರಾವತ ಆನೆಯ ಬೆನ್ನು ತಟ್ಟುವು ದರಿಂದ ಶಿಥಿಲವಾದ ಇಂದ್ರನ ಅಂಗದಾಭರಣವನ್ನು ತನ್ನ ಅಂಗದದೊಡನೆ ಸಂಘರ್ಷಿಸುವಂತೆ ಮಾಡುತ್ತಾ ತನ್ನದೇ ಆದ ಶ್ರೇಷ್ಠವಾದ ಮೂರ್ತಿಯನ್ನು ಹೊಂದಿದವನಾದ ಇಂದ್ರನ ಅರ್ಧ ಆಸನದ ಮೇಲೂ ಕೂಡ ಕುಳಿತು ಕೊಂಡನು.

ಶ್ಲೋಕ 8 : ಹೆಚ್ಚಾದ ಕೀರ್ತಿಯುಳ್ಳವನೂ ವಂಶಪ್ರದೀಪಕನೂ ಆದ ದಿಲೀಪನೆಂಬ ರಾಜನು ಅಂತಹ ಕಕುತ್ಸ್ಥನ ವಂಶದಲ್ಲಿ ಹುಟ್ಟಿದವನು ಈ ದಿಲೀಪನು ಇಂದ್ರನ ಅಸೂಯೆಯನ್ನು ಹೋಗಲಾಡಿಸುವುದಕ್ಕಾಗಿ ಒಂದು ಕಮ್ಮಿ ನೂರು ಯಾಗಗಳನ್ನು ಮಾಡಿದನು.

ಶ್ಲೋಕ 9 : ಈ ದಿಲೀಪನು ಭೂಮಿಯನ್ನು ಆಳುತ್ತಿರಲಾಗಿ ವಿಹಾರಸ್ಥಾನಕ್ಕೆ ಹೋಗುವ ಮಾರ್ಗ ಮಧ್ಯದಲ್ಲೇ ನಿದ್ದೆ ಹೋದ ಸ್ವೈರಿಣಿಯರಾದ ಸ್ತ್ರೀಯರ ವಸ್ತ್ರಗಳನ್ನು ಗಾಳಿಯೂ ಕೂಡ ಜರುಗಿಸುತ್ತಿರಲಿಲ್ಲ. ಅಪಹರಿಸಲು ಯಾವನು ತಾನೇ ಕೈಯನ್ನು ಚಾಚಿಯಾನು ? ಅಂತಹ ಆಳ್ವಿಕೆ ದಿಲೀಪನದಾಗಿತ್ತು.

ಸಂ. ವಾಕ್ಯ : 'यस्मिन्महीं .... .... हस्तम् ।'

ಶ್ಲೋಕ 10 : ಈ ತೆರನಾದ ಸಾಮರ್ಥ್ಯವುಳ್ಳ ದಿಲೀಪನ ಮಗನಾದ ರಘುವು (ತಂದೆಯಿಂದ ಬಂದ) ರಾಜ್ಯವನ್ನು ಪಾಲಿಸುತ್ತಿದ್ದಾನೆ. ವಿಶ್ವಜಿತ್ ಎಂಬ ಮಹಾಯಾಗವನ್ನು ಅನುಷ್ಠಿಸಿದವನಾದ ರಘುವು ನಾಲ್ಕು ದಿಕ್ಕುಗಳಿಂದಲೂ ಜಯಿಸಿ ತಂದು ಸಂವರ್ಧಿಸಲ್ಪಟ್ಟ ಐಶ್ವರ್ಯ

ವನ್ನು ವರ್ಣನಪಾತ್ರೆ ಮಾತ್ರ ಉಳಿದಿರುವಂತಹುದನ್ನಾಗಿ ಮಾಡಿದನು. ಯಾಗಾನಂತರದಲ್ಲಿ ದಾನಮಾಡಿದನು.

ಶ್ಲೋಕ 11 : ಬೆಟ್ಟಗಳನ್ನು ಹತ್ತಿ ಹೋಗಿರುವ, ಸಮುದ್ರಗಳನ್ನು ದಾಟಿ ಹೋಗಿರುವ, ಸರ್ಪಗಳ ವಾಸಸ್ಥಾನವಾದ ಪಾತಾಳವನ್ನು ಪ್ರವೇಶಿಸಿರುವ, ಮೇಲಕ್ಕೆ ಅಂದರೆ ಸ್ವರ್ಗಾದಿ ಲೋಕಗಳಿಗೆ ಹೋಗಿರುವ ಮತ್ತು ಮಧ್ಯೆ ವಿಚ್ಛೇದವಿಲ್ಲದಿರುವ ಇವನ ಕೀರ್ತಿಯನ್ನು ಇಷ್ಟೇ ಎಂದು ಅಳೆಯಲು ಸಾಧ್ಯವಿಲ್ಲ.

ಸಂ. ವಾಕ್ಯ : 'ತಲಂ ಗತं .... .... यालम् ।'

ಶ್ಲೋಕ 12 : ಅಜನೆಂಬ ರಾಜಕುಮಾರನು ಸ್ವರ್ಗದ ಅಧಿಪತಿಯಾದ ಇಂದ್ರನಿಗೆ ಜಯಂತನು ಹೇಗೋ ಹಾಗೆ ರಘುವಿಗೆ ತಕ್ಕವನಾಗಿ ಹುಟ್ಟಿದ್ದಾನೆ. - ಶಿಕ್ಷಣ ವಯಸ್ಸಿನಲ್ಲೇ ಇರುವ ಅಜನು ಈ ಲೋಕದ ಭಾರವಾದ ನೊಗವನ್ನು ಧುರಂಧರನಾದ ತಂದೆಗೆ ಸಮನಾಗಿಯೇ ಹೊತ್ತಿದ್ದಾನೆ.

ಸಂ. ವಾಕ್ಯ : 'गुर्वीम् धुरं .... .... बिभर्ति ।'

ಶ್ಲೋಕ 13 : ಕುಲದಿಂದಲೂ ಲಾವಣ್ಯದಿಂದಲೂ ಹೊಸವಯಸ್ಸಿನಿಂದಲೂ ವಿನಯವೇ ಪ್ರಧಾನವಾದ ಗುಣಗಳಿಂದಲೂ ಕೂಡ ನಿನಗೆ ಸಮನಾಗಿರುವ ಅಜಮಹಾರಾಜನನ್ನು ನೀನು ವರಿಸು. "ರತ್ನವು ಚಿನ್ನದೊಡನೆ ಒಂದುಗೂಡಲಿ."

ಸಂ. ವಾಕ್ಯ : 'रत्नं समागच्छतु काञ्चनेन ।'

ಶ್ಲೋಕ 14 : ಸುನಂದೆಯ ಮಾತು ಕೇಳಿ ರಾಜಪುತ್ರಿ ಇಂದುಮತಿಯು ಲಜ್ಜೆಯನ್ನು ನಿವಾರಿಸಿಕೊಂಡು ಪ್ರಸನ್ನತೆಯಿಂದ ಶುದ್ಧವಾದ ನೋಟದಿಂದ ವರಮಾಲಿಕೆಯಿಂದಲೋ ಎಂಬಂತೆ ಅಜಕುಮಾರನನ್ನು ಸ್ವೀಕರಿಸಿದಳು. ಅವನನ್ನು ಅನುರಾಗಪೂರ್ವಕವಾಗಿ ಚೆನ್ನಾಗಿ ನೋಡಿದಳು

ಶ್ಲೋಕ 15 : ಅನಂತರ, ರಾಜಕುಮಾರಿಯು ಯುವಕನಾದ

ಅಜನಲ್ಲಿ (ತನಗುಂಟಾಗಿರುವ) ಅಭಿಲಾಷೆಯ ಅನುರಾಗದ ಬಂಧವನ್ನು ನಾಚಿಕೆಯ ಕಾರಣದಿಂದ ಬಾಯಿಬಿಟ್ಟು ಹೇಳಲು ಶಕ್ತಳಾಗಲಿಲ್ಲ. ಆದರೂ ಕೂಡ ಗುಂಗುರು ಕೂದಲುಗಳುಳ್ಳ ಇಂದುಮತಿಯ ಆ ಅಭಿಲಾಷೆ ಬಂಧವು ರೋಮಾಂಚನದ ರೂಪದಿಂದ ಅವಳ ತೆಳುವಾದ ಶರೀರವನ್ನು ಭೇದಿಸಿಕೊಂಡು ಹೊರಬಂದಿತು.

ಶ್ಲೋಕ 16 : ಸಖಿ ಇಂದುಮತಿಯು ಈ ರೀತಿಯ ಸ್ಥಿತಿಯಲ್ಲಿರಲಾಗಿ ವೇತ್ರಧಾರಿಣಿಯಾದ ಸಹಚರಿ ಸುನಂದೆಯು ಪೂಜ್ಯಳೇ ಮತ್ತೊಬ್ಬನ ಕಡೆಗೆ ಹೋಗೋಣವೇ ? ಎಂದು ಹಾಸ್ಯಪೂರ್ವಕವಾಗಿ ಕೇಳಿದಳು. ಆಗ ಮದುವಣಗಿತ್ತಿಯಾದ ಇಂದುಮತಿಯು ಈ ಸುನಂದೆಯನ್ನು ಅಸಮಾಧಾನದಿಂದ ನೋಡಿದಳು.

ಶ್ಲೋಕ 17 : ಆನೆ ಸೊಂಡಿಲನ್ನು ಹೋಲುವ ತೊಡೆಗಳುಳ್ಳ ರಾಜಕುಮಾರಿಯು ಮಂಗಳಚೂರ್ಣದಿಂದ ಗೌರವರ್ಣವಾಗಿದ್ದ ವರಮಾಲೆಯನ್ನು ಮೂರ್ತಿಮತ್ತಾದ ಅನುರಾಗವನ್ನೋ ಎಂಬಂತೆ ತನ್ನ ಧಾತ್ರಿಯ ಕೈಗಳಿಂದ ತೆಗೆದುಕೊಂಡು ರಘುಪುತ್ರನಾದ ಅಜನ ಕೊರಳಲ್ಲಿ ಹಾಕಿದಳು.

ಸಂ. ವಾಕ್ಯ : 'आसञ्जयामास .... .... नुरागम् ।'

ಶ್ಲೋಕ 18 : ವರಣೀಯನಾದ ಅಜನು ಮಧೂಕ ಮುಂತಾದ ಮಂಗಳಕರಗಳಾದ ಪುಷ್ಪಗಳಿಂದಾಗಿದ್ದ- ವಿಶಾಲವಾದ ವಕ್ಷಃಸ್ಥಲದ ಮೇಲೆ ಉದ್ದವಾಗಿ ತೂಗಾಡುತ್ತಿದ್ದ ಆ ಮಾಲೆಯಿಂದ ವಿದರ್ಭರಾಜನ ತಂಗಿಯಾದ ಇಂದುಮತಿಯನ್ನು (ತನ್ನ) ಕೊರಳಿಗೆ ಅರ್ಪಿಸಿದ ಬಾಹುಪಾಶವುಳ್ಳವಳನ್ನಾಗಿ ತನ್ನನ್ನು ಗಾಢವಾಗಿ ಆಲಿಂಗಿಸಿದಂತೆ ಭಾವಿಸಿಕೊಂಡನು.

ಶ್ಲೋಕ 19 : ಆ ಸ್ವಯಂವರದಲ್ಲಿ ಸಮಾನವಾದ ಗುಣಗಳುಳ್ಳ ಇಂದುಮತೀ ಅಜರ ಒಟ್ಟುಗೂಡುವಿಕೆಯಿಂದ ಸಂತುಷ್ಟರಾದ ನಾಗರಿಕರು ಈ ಅಜನನ್ನು ಕೂಡಿದ ಇಂದುಮತಿಯು ಮೋಡಗಳಿಂದ ಬಿಡಲ್ಪಟ್ಟ ಶರತ್ಕಾಲದ ಚಂದ್ರನನ್ನು ಕೂಡಿದ ಬೆಳದಿಂಗಳೆಂದೂ ತನಗೆ ಸದೃಶವಾದ

ಸಮುದ್ರವನ್ನು ಪ್ರವೇಶಿಸಿದ ಗಂಗೆಯಂದೂ ಇತರ ರಾಜರ ಕಿವಿಗಳಿಗೆ ಪರುಷವಾದ ಒಂದೇ ಅಭಿಪ್ರಾಯದ ಮಾತನ್ನು ಪ್ರಕಟಪಡಿಸಿದರು.

ಸಂ. ವಾಕ್ಯ : **'शशिनमुपगतेयं .... .... न्यावतीर्णा ।'**

4. ಪ್ರಶ್ನೋತ್ತರ :

ಇಂದುಮತಿಗೆ ಚೇಟಿ ಸುನಂದೆಯು ಅಜನನ್ನು ಯಾವ ಬಗೆಯಲ್ಲಿ ಪರಿಚಯಿಸಿದಳು ?

(ಸೂಚನೆ : ಶ್ಲೋಕಗಳ ಭಾವವಿವರಣೆಯನ್ನು ನೋಡಿರಿ)

5. ವ್ಯಾಕರಣಾಂಶಗಳು :

1) ಕ್ರಿಯಾರೂಪಗಳು : 1) व्यतीयाय- ವಿ + ಅತಿ + ಇ ಧಾತು, ಲಿಟ್ ಲಕಾರ, ಪ್ರಥಮ ಪುರುಷ, ಏಕವಚನ. 2) प्रपेदे- ಪ್ರ+ ಪದ್ ಧಾತು, ಲಿಟ್ ಲಕಾರ, ಪ್ರಥಮ ಪುರುಷ, ಏಕವಚನ 3) वृणीत- – ವೃ ಧಾತು, ವಿಧಿಲಿಙ್ ಲಕಾರ, ಪ್ರಥಮ ಪುರುಷ, ಏಕವಚನ. 4) व्यावर्तत- ವಿ + ಆ + ವೃತ್ ಧಾತು, ಲಙ್ ಲಕಾರ, ಪ್ರಥಮ ಪುರುಷ, ಏಕವಚನ 5) प्रचक्रमे- ಪ್ರ + ಕ್ರಮ್ ಧಾತು, ಲಿಟ್ ಲಕಾರ, ಪ್ರಥಮ ಪುರುಷ, ಏಕವಚನ. 6) दधति- ಧಾ ಧಾತು, ಲಟ್ ಲಕಾರ, ಪ್ರಥಮ ಪುರುಷ, ಬಹುವಚನ. 7) अधितष्ठौ- ಅಧಿ + ಸ್ಥಾ ಧಾತು, ಲಿಟ್ ಲಕಾರ, ಪ್ರಥಮ ಪುರುಷ, ಏಕವಚನ. 8) लम्भयेत्- ಲಂಬ್ ಧಾತು, ವಿಧಿಲಿಙ್ ಲಕಾರ, ಪ್ರಥಮ ಪುರುಷ, ಏಕವಚನ. 9) बिभर्ति- ಭೃ ಧಾತು, ಲಟ್ ಲಕಾರ, ಪ್ರಥಮ ಪುರುಷ, ಏಕವಚನ. 10) प्रत्यग्रहीत्- ಪ್ರತಿ + ಗೃಹ್ ಧಾತು, ಲಙ್ ಲಕಾರ, ಪ್ರಥಮ ಪುರುಷ, ಏಕವಚನ. 11) शशाक- ಶಕ್ ಧಾತು, ಲಿಟ್ ಲಕಾರ, ಪ,ಥಮ ಪುರುಷ, ಏಕವಚನ. 12) निराक्रामत्- ನಿರ್ + ಆ + ಕ್ರಮ್ ಧಾತು, ಲಙ್ ಲಕಾರ, ಪ್ರಥಮ ಪುರುಷ ಏಕವಚನ. 13) आसञ्जयामास- ಆ + ಸಂಜ್ ಧಾತು, ಲಿಟ್ ಲಕಾರ, ಪ್ರಥಮ ಪುರುಷ ಏಕವಚನ. 14) अमंस्त- ಮನ್

ಧಾತು, ಲುಙ್ ಲಕಾರ, ಪ್ರಥಮ ಪುರುಷ, ಏಕವಚನ.

2) ವ್ಯಾಕರಣವಿಶೇಷ :

अधितष्ठौ– ಅಧಿ+ಸ್ಥಾ ಧಾತು, ಲಿಟ್ ಲಕಾರ, ಪ್ರಥಮ ಪುರುಷ, ಏಕವಚನ. ಅಧಿ ಉಪಸರ್ಗ ಬಂದು ಇಕಾರ ಉತ್ಪತ್ತಿಯಿಂದ ತಸ್ಥೌ ಎಂಬಲ್ಲಿ ಸ ಕಾರಕ್ಕೆ ಷಕಾರ, ಆನಂತರ ಷ್ಟುತ್ವ ಬಂದಿದೆ.

3) ಸಮಾಸಗಳು :

1) **समावेशितचित्तवृत्तिम्— समावेशिता चित्तवृत्तिः यया ताम्** (ಬಹುವ್ರೀಹಿ)

2) **इन्दुप्रभां— इन्दोः प्रभामिव प्रभा यस्याः, ताम्** (ಬಹುವ್ರೀಹಿ)

3) **प्राप्तपिनाकिलीलः — प्राप्ता पिनाकिनः लीला येन, सः** (ಬಹುವ್ರೀಹಿ)

4) **असूयाकुटिलं– असूयया कुटिलं यथा भवति तथा** (ತೃತೀಯಾ ತತ್ಪುರುಷ)

5) **करभोपमोरूः– करभः उपमा ययोः तौ करभोपमौ करभोपमौ ऊरू यस्याः, सा** (ಬಹುವ್ರೀಹಿ)

6) **चूर्णगौरं — चूर्णेन गौरम्** (ತೃತೀಯಾ ತತ್ಪುರುಷ)

7) **समगुणयोगप्रीतयः— समाः गुणाः ययोः तौ समगुणौ, तयोः योगेन प्रीतिः येषां, ते** (ಬಹುವ್ರೀಹಿ)

4) ಏಕಪದ :

**दम्यः — दमयितुं योग्यः ।**

5) ರೂಪ ಗುರುತಿಸುವುದು :

उपेयुषः– ಉಪೇಯಿವಸ್ ಶಬ್ದದ ಷಷ್ಠೀ ಏಕವಚನ ರೂಪ.

6. ಕಠಿಣ ಪದಗಳ ಅರ್ಥ :

पतिवरा– ವಿವಾಹಯೋಗ್ಯ ಕನ್ಯೆ षट्पदाली– ಭ್ರಮರ ಸಮೂಹ
सहकार – ಮಾವಿನಮರ आस्थाय – ಮೇಲೇರಿ उपेयुषः – ದೊರೆತ
विभूति – ಐಶ್ವರ್ಯವನ್ನು शालीनतया– ಮುಗ್ಧಭಾವದಿಂದ

## ಪಾಠ : 12 भस्मावशेषं मदनं चकार

## [ ಮನ್ಮಥನನ್ನು ಬೂದಿ ಮಾಡಿದನು ]

1. ಅವತರಣಿಕೆ :

**'परोपकारार्थं सतां विभूतयः'**—

ಸತ್ಪುರುಷರು, ಮಹಾನುಭಾವರು ತಮ್ಮ ಸರ್ವಸ್ವವನ್ನೂ ಪರೋಪಕಾರಕ್ಕಾಗಿ ತ್ಯಾಗಮಾಡುತ್ತಾರೆ. 'ಕುಮಾರಸಂಭವಂ' ಕಾವ್ಯದ ಈ ಮೇಲಿನ ಭಾಗದಲ್ಲಿ, ದೇವತೆಗಳ ಕಾರ್ಯಸಾಧನೆಗಾಗಿ (ಶಿವ-ಪಾರ್ವತಿಯರ ಮಿಳನ ), ಮನ್ಮಥನು ತನ್ನ ಪ್ರಾಣವನ್ನೇ ಅರ್ಪಿಸಿದ ಕಥಾಭಾಗವನ್ನು ಕಾಣುತ್ತೇವೆ.

2. ಕಾಳಿದಾಸನ ಬಗೆಗೆ ಟಿಪ್ಪಣಿ :

[ ಸೂಚನೆ : 'रत्नं समागच्छतु काञ्चनेन' ಭಾಗದಲ್ಲಿ ನೋಡಿರಿ ]

3. ಶ್ಲೋಕಗಳ ವಿವರ (ಸಂದರ್ಭ ವಾಕ್ಯ ಸಹಿತ) :

[ ಸೂಚನೆ : ಸಂದರ್ಭವಾಕ್ಯವನ್ನು ಬರೆಯುವ ಮೊದಲು ಈ ಅಂಶವನ್ನು ಬರೆಯಿರಿ : ಈ ವಾಕ್ಯಾಂಶವನ್ನು , ಕಾಳಿದಾಸ ಮಹಾಕವಿ ವಿರಚಿತ 'ಕುಮಾರಸಂಭವ' ಕಾವ್ಯದ 'ಭಸ್ಮಾವಶೇಷಂ ಮದನಂ ಚಕಾರ' ಭಾಗದಿಂದ ಆರಿಸಿಕೊಡಲಾಗಿದೆ.]

ಸಂದರ್ಭ ವಾಕ್ಯಗಳು : 1, 2, 4, 5, 8, 9, 10, 13,

14, 15, 16, 17, 18, 19 ನೇ ಶ್ಲೋಕಗಳಲ್ಲಿವೆ.

ಶ್ಲೋಕ 1 : ಆಸನ್ನಮೃತ್ಯುವುಳ್ಳ ಆ ಕಾಮನು (ಅಲ್ಲಿ) ಹುಲಿಯ ಚರ್ಮವನ್ನು ಹೊದಿಸಿದ್ದ ದೇವದಾರುವೃಕ್ಷದ ವೇದಿಕೆಯ ಮೇಲೆ ಕುಳಿತು ಸಮಾಧಿಸ್ಥನಾಗಿದ್ದ ಆ ಮುಕ್ಕಣ್ಣನನ್ನು ಕಂಡನು.

ಶ್ಲೋಕ 2 : ಈ ಪ್ರಕಾರವಾಗಿದ್ದ ಮನಸ್ಸಿನಲ್ಲೂ ಎದುರಿಸಲಸಾಧ್ಯವಾದ ಬೆಸ ಸಂಖ್ಯೆಯ ಕಣ್ಣುಗಳ ಆ ಶಿವನನ್ನೂ ಮನ್ಮಥನು ಸಮೀಪದಿಂದಲೇ ನೋಡುತ್ತಾ ಭಯದಿಂದ ಕೈ ಸಡಿಲಗೊಂಡು ಧನುಸ್ಸು ಬಾಣ (ಎರಡೂ) ತನ್ನ ಕೈಗಳಿಂದ ಜಾರಿ ಬಿದ್ದುದನ್ನು ಗಮನಿಸಲಿಲ್ಲ.

ಶ್ಲೋಕ 3 : ಆಗ ನಷ್ಟಪ್ರಾಯವಾಗಿದ್ದ ಆತನ ಬಲವನ್ನು (ತನ್ನ) ದೇಹ ಸೌಂದರ್ಯದಿಂದ ಪುನಃ ಉಜ್ಜೀವಿತಗೊಳಿಸುತ್ತಿರುವಳೋ ಎಂಬಂತೆ ಪರ್ವತರಾಜಪುತ್ರಿಯು ಇಬ್ಬರು ವನದೇವತೆಯರಿಂದ ಹಿಂಬಾಲಿಸಲ್ಪಡುತ್ತಾ ಕಾಣಿಸಿಕೊಂಡಳು.

ಶ್ಲೋಕ 4 : ಎಲ್ಲಾ ಅವಯವಗಳಲ್ಲೂ ದೋಷರಹಿತಳಾದ ರತಿಗೂ ನಾಚಿಕೆಯುಂಟಾಗುವಂತೆ ಮಾಡುತ್ತಿದ್ದ ಆ ಪಾರ್ವತಿಯನ್ನು ಕಂಡು ಪುಷ್ಪಚಾಪನಾದ ಮನ್ಮಥನು ಜಿತೇಂದ್ರಿಯನಾದ ಶೂಲಪಾಣಿ (ಶಿವ)ನಲ್ಲಿ ತನ್ನ ಕಾರ್ಯ ಸಿದ್ಧಿಯಾಗುವುದನ್ನು ನಿರೀಕ್ಷಿಸಿದನು.

ಶ್ಲೋಕ 5 : ಉಮೆಯೂ ಕೂಡ ಮುಂದೆ ತನ್ನ ಪತಿಯಾಗುವವನಾಗಿದ್ದ ಶಂಭುವಿನ (ಆಶ್ರಮದ) ದ್ವಾರದೇಶಕ್ಕೆ ಬಂದು ಸೇರಿದಳು. (ಅದಕ್ಕೆ ಸರಿಯಾಗಿ) ಆತನೂ ತನ್ನೊಳಗೇ ಪರಮಾತ್ಮನೆಂಬ ಹೆಸರುಳ್ಳ ಪರಂಜ್ಯೋತಿಯನ್ನು ಕಂಡು ಯೋಗವನ್ನು ನಿಲ್ಲಿಸಿದನು.

ಶ್ಲೋಕ 6 : ಬಳಿಕ ಆದಿಶೇಷನ ಹೆಡೆಗಳ ಅಗ್ರಭಾಗಗಳಿಂದ (ತಾನು ಕುಳಿತಿದ್ದ) ಭೂಮಿ ಭಾಗವು ಅತಿ ಪ್ರಯಾಸ ಪೂರ್ವಕವಾಗಿ ಧರಿಸಲ್ಪಟ್ಟಿರಲು ಶಿವನು ಶ್ವಾಸವನ್ನು ಪುನಃ ಸಂಚರಿಸುವಂತೆ ಮಾಡಿ ದೃಢವಾಗಿದ್ದ (ತನ್ನ) ವೀರಾಸನವನ್ನು ಸಡಿಲಿಸಿದನು.

ಶ್ಲೋಕ 7 : ನಂದಿಯು ಅವನಿಗೆ ನಮಸ್ಕರಿಸಿ ಶುಶ್ರೂಷೆಮಾಡುವ ಕಾರಣದಿಂದ ಶೈಲಸುತೆ (ಪಾರ್ವತಿ) ಯು ಅಲ್ಲಿಗೆ ಬಂದಿರುವುದಾಗಿ ಅರಿಕೆ ಮಾಡಿದನು. ಮತ್ತು (ತನ್ನ) ಸ್ವಾಮಿಯು ಹುಬ್ಬಿನ ಸಂಜ್ಞಾ ಮಾತ್ರ ದಿಂದ ಆಕೆಯ ಪ್ರವೇಶಕ್ಕೆ ಅನುಮತಿ ದೊರಕಲಾಗಿ ಆಕೆಯನ್ನು ಒಳಕ್ಕೆ ಪ್ರವೇಶಗೊಳಿಸಿದನು.

ಶ್ಲೋಕ 8 : ಆಕೆಯ ಇಬ್ಬರು ಸಖಿಯರಿಂದಲೂ ತಮ್ಮ ಕೈಗ ಳಿಂದಲೇ ಕೊಯ್ಯಲ್ಪಟ್ಟಿದ್ದ (ಮತ್ತು) ಚಿಗರುಗಳ ಚೂರುಗಳಿಂದ ಮಿಶ್ರಿತ ವಾಗಿದ್ದ ವಸಂತಕಾಲದ ಹೂವುಗಳ ರಾಶಿಯು ಶಿವನ ಪಾದ ಮೂಲದಲ್ಲಿ ನಮಸ್ಕಾರ ಪೂರ್ವಕವಾಗಿ ಎರಚಲ್ಪಟ್ಟಿತು.

ಶ್ಲೋಕ 9 : ಉಮೆಯೂ ಕೂಡ ತನ್ನ ಕಪ್ಪಾದ ಮುಂಗುರುಳು ಗಳ ಮಧ್ಯೆ ಶೋಭಿಸುತ್ತಿದ್ದ ನವಕರ್ಣಿಕಾರ ಕುಸುಮವನ್ನೂ (ಅದರ ಸ್ಥಾನದಿಂದ) ಜಾರುವಂತೆ ಮಾಡುತ್ತಾ, (ತಾನು ಕರ್ಣಾಭರಣವಾಗಿ ಧರಿ ಸಿದ್ದ) ಪಲ್ಲವವು ಕಿವಿಯಿಂದ (ಕೆಳಗೆ) ಬೀಳುತ್ತಿರಲು, ವೃಷಭಧ್ವಜನಾದ ಶಿವನಿಗೆ ಶಿರಸಾ ನಮಸ್ಕಾರ ಮಾಡಿದಳು.

ಶ್ಲೋಕ 10 : '(ನಿನ್ನನ್ನು ಬಿಟ್ಟು) ಬೇರೊಬ್ಬಳನ್ನು ಸೇರದಂಥ ಪತಿಯನ್ನು ಹೊಂದು' ಎಂದು ಶಿವನು ಸತ್ಯವನ್ನೇ ಅವಳಿಗೆ ನುಡಿದನು. ಲೋಕದಲ್ಲಿ ಮಹಾಪುರುಷರ ಮಾತುಗಳು ಎಂದಿಗೂ ವಿಸಂವಾದಿಯಾದ ಅರ್ಥವನ್ನು ಕೊಡುವುದಿಲ್ಲವಲ್ಲವೆ ?

ಶ್ಲೋಕ 11 : ಕಾಮನಾದರೋ ಬಾಣ ಪ್ರಯೋಗಕ್ಕೆ (ಅದೇ) ಸಮಯವೆಂಬುದನ್ನು ಕಂಡು, ಬೆಂಕಿಯ ಬಾಯೊಳಕ್ಕೆ ಪ್ರವೇಶಿಸುವ ಪತಂಗದ ಹುಳುವಿನಂತೆ, ಉಮೆಯು ಕಣ್ಣೆದುರಿಗೇ ಶಿವನ ಮೇಲೆ ಗುರಿ ಯಿಟ್ಟವನಾಗಿ(ತನ್ನ) ಬಿಲ್ಲಿನ ಹೆದೆಯನ್ನು ಪುನಃ ಪುನಃ ಸ್ಪರ್ಶಮಾಡಿದನು.

ಶ್ಲೋಕ 12 : ಬಳಿಕ ತಪಸ್ವಿಯಾದ ಶಿವನಿಗೆ ಸೂರ್ಯನ ಕಿರಣ ಗಳಿಂದ ಶೋಷಿತವಾಗಿದ್ದ ಮಂದಾಕಿನೀ (ನದಿಯ) ಪದ್ಮಬೀಜಗಳ ಮಾಲಿಕೆ ಯನ್ನು ಗೌರಿಯು ತನ್ನ ಕೆಂಪು ಬಣ್ಣದ ಕೈಯಿಂದ ಸಮರ್ಪಿಸಿದಳು.

Radha .S. V

ಶ್ಲೋಕ 13 : ತ್ರಿಲೋಚನನು (ಶಿವನು) ಅರ್ಥಿ ಪ್ರಿಯನಾಗಿದ್ದುದರಿಂದಲೇ ಆ ಮಾಲಿಕೆಯನ್ನು ಪ್ರತಿಗ್ರಹಮಾಡಲು ಉಪಕ್ರಮಿಸಿದನು. (ಅದಕ್ಕೆ ಸರಿಯಾಗಿ) ಪುಷ್ಪಧನುಸ್ಸುಳ್ಳ ಮನ್ಮಥನೂ ಕೂಡ ತನ್ನ ಧನುಸ್ಸಿಗೆ ಸಮ್ಮೋಹನವೆಂಬ ಹೆಸರಿನ ಅಮೋಘವಾದ ಬಾಣವನ್ನು ಸೇರಿಸಿದನು.

ಶ್ಲೋಕ 14 : ಚಂದ್ರೋದಯ ಆರಂಭ ಕಾಲದಲ್ಲಿ ಸಮುದ್ರವು ಹೇಗೋ ಹಾಗೆ, ಹರನೂ ಕೂಡ ಸ್ವಲ್ಪಮಟ್ಟಿಗೆ ಧೈರ್ಯಗುಂದಿದವನಾಗಿ, ತೊಂಡೆಹಣ್ಣಿನಂತಿದ್ದ ಕೆಳತುಟಿಯುಳ್ಳ ಉಮಾಮುಖದ ಮೇಲೆ (ತನ್ನ ಮೂರು) ಕಣ್ಣುಗಳ (ನೋಟ) ವನ್ನೂ ಇಟ್ಟನು.

ಶ್ಲೋಕ 15 : ಶೈಲಸುತೆ ಪಾರ್ವತಿಯೂ ಕೂಡ ಕುಸುಮಿತವಾಗುತ್ತಿರುವ ಕೋಮಲವಾದ ನೀಪವೃಕ್ಷಕ್ಕೆ ಸಮನಾದ (ಅಂದರೆ ರೋಮಾಂಚಗೊಂಡ) ಅಂಗಗಳಿಂದ ತನ್ನ ಶೃಂಗಾರ ಭಾರವನ್ನು ಪ್ರಕಾಶಗೊಳಿಸುತ್ತಾ, (ಲಜ್ಜೆಯಿಂದ) ವಿಭ್ರಾಂತವಾದ ಕಣ್ಣುಗಳುಳ್ಳ (ಆದ್ದರಿಂದಲೇ) ತುಂಬಾ ಸುಂದರವಾದ (ತನ್ನ) ಮುಖವನ್ನು ಬೇರೆ ಕಡೆಗೆ ಸ್ವಲ್ಪ ತಿರುಗಿಸಿಕೊಂಡು ನಿಂತುಕೊಂಡಳು.

ಶ್ಲೋಕ 16 : ಅನಂತರ, ಶಿವನು ಜಿತೇಂದ್ರಿಯನಾಗಿದ್ದುದರಿಂದಲೇ ಇಂದ್ರಿಯ ಕ್ಷೋಭವನ್ನು ಪುನಃ ದೃಢವಾಗಿ ನಿಗ್ರಹಿಸಿ ತನ್ನ ಮನೋವಿಕಾರಕ್ಕೆ ಕಾರಣವನ್ನು ನೋಡುವ ಇಚ್ಛೆಯುಳ್ಳವನಾಗಿ, ಎಲ್ಲಾ ದಿಕ್ಕುಗಳ ಕಡೆಗೂ (ತನ್ನ) ದೃಷ್ಟಿಯನ್ನು ಪ್ರಸಾರಗೊಳಿಸಿದನು.

ಶ್ಲೋಕ 17 : (ಆಗ) ಆ ಶಿವನು, ಬಲಗಣ್ಣಿನ ಅಪಾಂಗದಲ್ಲಿಟ್ಟಿರುವ ಬಲಮುಷ್ಟಿ, ಸ್ವಲ್ಪ ಬಗ್ಗಿದ ಹೆಗಲು, ಒಳಗಡೆಗೆ ಬಗ್ಗಿಸಿದ್ದ ಸುಂದರವಾದ ಧನಸ್ಸು– ಇವುಗಳುಳ್ಳವನಾಗಿ ಬಾಣಪ್ರಯೋಗ ಮಾಡಲು ಉದ್ಯುಕ್ತನಾಗಿರುವ ಮನ್ಮಥನನ್ನು ನೋಡಿದನು.

ಶ್ಲೋಕ 18 : ತಪಸ್ಸಿನ ಪರಾಮರ್ಶದಿಂದ ವೃದ್ಧಿಗೊಂಡ ಕೋಪ ಮತ್ತು ಹುಬ್ಬು ಗಂಟಿಕ್ಕಿರುವುದರಿಂದ ನೋಡಲು ದುಸ್ಸಾಧ್ಯವಾದ

ರಾಧಾ ಶಾ

ಮುಖಗಳುಳ್ಳ ಆತನ ಮೂರನೆಯ ಕಣ್ಣಿನಿಂದ, ಉರಿಯುವ ಜ್ವಾಲೆಯುಳ್ಳ ಅಗ್ನಿಯು ಇದ್ದಕ್ಕಿದ್ದಂತೆ ಹೊರಹೊರಟಿತು.

ಶ್ಲೋಕ 19 : "ಪ್ರಭೋ, ಕೋಪವನ್ನು ತಡೆದುಕೋ, ತಡೆದುಕೋ" ಎಂಬುದಾಗಿ ಆಕಾಶದಲ್ಲಿ ದೇವತೆಗಳ ಮಾತು ಹೊರಡುವಷ್ಟರಲ್ಲೇ, ಶಿವನಕಣ್ಣಿನಲ್ಲಿ ಜನಿಸಿದ ಅಗ್ನಿಯು ಆ ಮನ್ಮಥನನ್ನು ಭಸ್ಮಶೇಷ ಮಾಡಿತು.

4. ಪ್ರಶ್ನೋತ್ತರ :

1) ದೇವತೆಗಳ ಕಾರ್ಯಸಂಪನ್ನತೆಗಾಗಿ ಬಂದ ಮದನನು ಮಾಡಿದ ಕಾರ್ಯವೇನು ? ಇದರ ಪರಿಣಾಮವೇನಾಯಿತು ?

2) ಮನ್ಮಥನು, ತಪಸ್ಸಿನಲ್ಲಿದ್ದ ಈಶ್ವರನ ತಪಸ್ಸಿಗೆ ಹೇಗೆ ಭಂಗವನ್ನುಂಟುಮಾಡಿದನು ? ಇದಕ್ಕಾಗಿ ಅವನು ಅನುಭವಿಸಿದ ದಂಡನೆ (ಶಿಕ್ಷೆ) ಏನು ?

[ ಸೂಚನೆ : ಭಾವವಿವರಣೆಯನ್ನು ನೋಡಿರಿ ]

5. ವ್ಯಾಕರಣಾಂಶಗಳು :

1) ಕ್ರಿಯಾರೂಪಗಳು : 1) अलक्षयत्- ಲಕ್ಷ್ ಧಾತು, ಲಙ್ ಲಕಾರ, ಪ್ರಥಮ ಪುರುಷ, ಏಕವಚನ. 2) आशशंस-ಆ+ಶಂಸ್ ಧಾತು, ಲಿಟ್ ಲಕಾರ, ಪ್ರಥಮ ಪುರುಷ, ಏಕವಚನ. 3) समाससाद- ಸಮ್+ಆ+ಸದ್ ಧಾತು, ಲಿಟ್ ಪ್ರಥಮ ಪುರುಷ, ಏಕವಚನ. 4) उपारराम- ಉಪ+ಆ+ರಮ್ ಧಾತು, ಲಿಟ್ ಲಕಾರ, ಪ್ರಥಮಪುರುಷ ಏಕವಚನ. 5) बिभेद- ಭಿದ್ ಧಾತು, ಲಿಟ್ ಲಕಾರ, ಪ್ರಥಮ ಪುರುಷ, ಏಕವಚನ. 6) व्यकीर्यत - ವಿ+ಕೃ ಧಾತು, ಕರ್ಮಣಿ ಲಙ್ ಲಕಾರ, ಪ್ರಥಮ ಪುರುಷ, ಏಕವಚನ. 7) आममर्श- ಆ+ಮೃಶ್ ಧಾತು, ಲಿಟ್ ಲಕಾರ, ಪ್ರಥಮ ಪುರುಷ, ಏಕವಚನ. 8) उपनिन्ये- ಉಪ+ನಿ ಧಾತು, ಲಿಟ್ ಲಕಾರ, ಪ್ರಥಮ ಪುರುಷ, ಏಕವಚನ. 9) उपचक्रमे-

ಉಪ+ಕ್ರಮ್ ಧಾತು, ಲಿಟ್ ಲಕಾರ, ಪ್ರಥಮ ಪುರುಷ, ಏಕವಚನ. 10) समधत्त- ಸಮ್+ಧಾ ಧಾತು, ಲಙ್ ಲಕಾರ, ಪ್ರಥಮ ಪುರುಷ, ಏಕವಚನ. 11) ससर्ज- ಸೃಜ್ ಧಾತು, ಲಿಟ್ ಲಕಾರ, ಪ್ರಥಮ ಪುರುಷ, ಏಕವಚನ. 12) निष्पपात- ನಿಸ್+ಪತ್ ಧಾತು, ಲಿಟ್ ಲಕಾರ, ಪ್ರಥಮ ಪುರುಷ, ಏಕವಚನ.

2) ಸಮಾಸಗಳು :

1) त्रियम्बकम्- त्रीणि अम्बकानि यस्य सः (ಬಹುವ್ರೀಹಿ)
2) कृतप्राणविमुक्तः - कृता प्राणानां विमुक्तिः येन सः (ಬಹುವ್ರೀಹಿ)
3) कर्णच्युतपल्लवेन - कर्णात् च्युतः पल्लवः यस्य सः तेन (ಪಂಚಮೀ ತತ್ಪುರುಷ, ಬಹುವ್ರೀಹಿ)
4) अनन्यभाजं- अन्यां भजतीति अन्यभाक्, न अन्यभाक् अनन्यभाक् तम् (ನಞ್ ತತ್ಪುರುಷ)
5) मन्दाकिनीपुष्करबीजमालाम्- मन्दाकिन्याः पुष्कराणि तेषां बीजानि तेषां मालाम् (ಷಷ್ಠೀ ತತ್ಪುರುಷ)
6) नतांसः- नतः अंसः यस्य सः, तम् (ಬಹುವ್ರೀಹಿ)
7) चक्रीकृतचारुचापम्- चारुः चापः चारुचापः, चक्रीकृतः चारुचापः येन सः, तम् (ಬಹುವ್ರೀಹಿ)
8) उदर्चिः - उद्गतम् अर्चिः यस्य सः (ಬಹುವ್ರೀಹಿ)
9) भस्मावशेषम् - भस्म एव अवशेषः यस्य सः तम् (ಬಹುವ್ರೀಹಿ)

6. ಕಠಿಣ ಪದಗಳ ಅರ್ಥ :

त्रियम्बकं-ಈಶ್ವರನನ್ನು स्थावरराजकन्या-ಬೆಟ್ಟದ ರಾಜನ ಮಗಳು भानुमतः-ಸೂರ್ಯನ पुष्पधन्वा-ಮನ್ಮಥ अम्बुराशि-ನೀರಿನ ಸಮೂಹ भस्म-ಬೂದಿ

# ಪಾಠ 13 गङ्गास्तवः

## [ ಗಂಗಾಸ್ತುತಿ ]

1. ಅವತರಣಿಕೆ :

ಸಂಸ್ಕೃತ ಸಾಹಿತ್ಯದ ಶೃಂಗಾರ ಕವಿಯೆಂದು ಹೆಸರಾದ ಪಂಡಿತರಾಜ ಜಗನ್ನಾಥನು, ತನ್ನ ಆತ್ಮಕಲ್ಯಾಣಕ್ಕಾಗಿ ಗಂಗೆಯನ್ನು ಪ್ರಾರ್ಥಿಸಿ ಗಂಗಾ ಮಡಿಲಲ್ಲಿ ಮಲಗಿದ ಕಥೆ ಲೋಕಪ್ರಸಿದ್ಧವಾಗಿದೆ. ಈತನು ಗಂಗೆಯನ್ನು ಪ್ರಾರ್ಥಿಸಿದ ಕೆಲವು ಶ್ಲೋಕಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ.

2. ಪಂಡಿತರಾಜ ಜಗನ್ನಾಥ : (ಟಿಪ್ಪಣಿ)

ಸಂಸ್ಕೃತ ಸಾಹಿತ್ಯಾಕಾಶದ ಮಹಾನಕ್ಷತ್ರನು. ' ಗಂಗಾ ಲ ಹ ರಿ ' ಅನುಪಮ ಖಂಡಕಾವ್ಯ. ಈತನ ಕಾಲ– ಕ್ರಿ. ಶ. 17 ನೇ ಶತಮಾನ. ಆಂಧ್ರದ ಗೋದಾವರೀ ಪ್ರಾಂತ್ಯದ ' ಮುಂಗುಂದ ' ಈತನ ಜನ್ಮಸ್ಥಾನ. ಲಕ್ಷ್ಮೀ-ಪೆರುಭಟ್ಟ– ಈತನ ತಾಯಿತಂದೆಗಳು. ಈತನಿಗೆ ಷಹಜಹಾನನ ಆಶ್ರಯ ದೊರೆತಿತ್ತು. ' ಪಂಡಿತರಾಜ '– ಇವನ ಬಿರುದು. ಇವನು ವ್ಯಾಕರಣ, ಅಲಂಕಾರ, ಕಾವ್ಯಗ್ರಂಥಗಳನ್ನು ರಚಿಸಿದ್ದಾನೆ ರಸಗಂಗಾಧರ, ಚಿತ್ರಮೀಮಾಂಸಾ ಖಂಡನ, ಭಾಮಿನೀ ವಿಲಾಸ ಮುಂತಾದವು ಈತನ ಪ್ರಮುಖ ಕೃತಿಗಳು.

3. ಶ್ಲೋಕಗಳ ವಿವರ (ಸಂದರ್ಭ ವಾಕ್ಯ ಸಹಿತ) :

ಶ್ಲೋಕ 1 : ಎಲೌ ಜಗನ್ಮಾತೆಯಾದ ಗಂಗಾದೇವಿಯೇ, ಸಮಸ್ತ ಪ್ರಪಂಚದ ವಿಲಕ್ಷಣ ಸೌಭಾಗ್ಯವೂ, ಲೀಲಾ ವಿಶೇಷದಿಂದ ಸೃಷ್ಟಿಯನ್ನು ಸೃಷ್ಟಿಸುವ ಶಿವನ ಸಕಲೈಶ್ವರ್ಯವೂ, ಚತುರ್ವೇದ (ಋಕ್–ಯಜುಸ್–ಸಾಮ–ಅಥರ್ವ) ಗಳ ಸರ್ವಸ್ವವೂ, ದೇವತೆಗಳ ಮೂರ್ತಿಮತ್ತಾದ ಸುಕೃತವೂ ಆಗಿರುವ ಮಂಗಳಮಯವಾದ ಅಮೃತ ಸದೃಶವಾದ ನಿನ್ನ ಗಂಗಾ–ಜಲವು, ನಮ್ಮೆಲ್ಲರ (ಭಕ್ತಿಶ್ರದ್ಧಾಭಾವಯುತರಾಗಿ ತಲೆಬಾಗಿ

ನಿಂದಿರುವ) ಅಮಂಗಳವನ್ನು ನಾಶ ಮಾಡಲಿ." ಎಂದು ಪಂಡಿತರಾಜ ಜಗನ್ನಾಥಕವಿಯು 'ಗಂಗಾಲಹರಿ'ಯ ಈ ಶ್ಲೋಕದಲ್ಲಿ ನಮಸ್ಕ್ರಿಯಾ ರೂಪವಾದಮಂಗಳಾನುಶಾಸನವನ್ನು ಹೇಳಿದ್ದಾನೆ.

ಸಂ. ವಾಕ್ಯ : 'सुधासौदर्यं ते सलिलमशिवं नः शमयतु ।'

ಶ್ಲೋಕ 2 : "ಎಲೌ ಜಗನ್ಮಾತೆಯಾದ ಗಂಗಾದೇವಿಯೇ, ನಿನ್ನನ್ನು ಆಶ್ರಯಿಸಿ ಪರಿಶೋಭಿಸುವ, ಅತಿಶಯವಾದ ಅಭಿಮಾನಿಯಾದ ನಾನು, ಸಮಸ್ತ ದೇವಗಣಗಳನ್ನು ತಿರಸ್ಕರಿಸಿದ್ದೇನೆ.

ನೀನಿರುವಾಗ, ನನಗೆ ಅವರಿಂದೇನಾಗಬೇಕಾಗಿದೆ ! ನೀನೇ ನನ್ನ ಏಕಮಾತ್ರ ಆಶ್ರಯದಾತಳು. ನನಗೆ ಮತ್ತ್ಯಾರ ಕೃಪೆಯೂ ಬೇಡ. ಇಂತಿರುವಾಗ, ನೀನೇ ನನ್ನ ಬಗೆಗೆ ಔದಾಸೀನ್ಯ ತಳೆದರೆ ನನ್ನ ಗತಿಯೇನು ! ನಾನು ಅನಾಥನಾಗಿ ವ್ಯಥೆಪಡಬೇಕಾದೀತು. ಹಾಗೆ ಮಾಡದೆ ಕೈ ಹಿಡಿದು ಕಾಪಾಡು" ಎಂದು ಪಂಡಿತರಾಜಜಗನ್ನಾಥ ಕವಿಯು ತನ್ನ 'ಗಂಗಾಲಹರಿ'ಯಲ್ಲಿ ಮುಕ್ತಕಂಠದಿಂದ ಲೋಕಮಾತೆಯಾದ ಗಂಗೆಯನ್ನು ಪ್ರಾರ್ಥಿಸಿದ್ದಾನೆ.

ಸಂ. ವಾಕ್ಯ : 'निराधारो हा रोदिमि कथय केषामिह पुनः ।'

ಶ್ಲೋಕ 3 : "ಎಲೌ ಗಂಗಾಮಾತೆಯೇ, ಸಕಲ ಸಂಪತ್ಸಮೂಹದಿಂದ ಸಮೃದ್ಧವಾದ ಸಾಮ್ರಾಜ್ಯ ಸೌಖ್ಯವನ್ನು ತೃಣೀಕರಿಸಿ, (ಹುಲ್ಲು ಕಡ್ಡಿಗೆ ಸಮವೆಂದು ಭಾವಿಸಿ) ಚಾಂಚಲ್ಯದಿಂದ ನರ್ತಿಸುತ್ತಿರುವ ಅಲೆಗಳಿಂದ ಕೂಡಿದ ನಿನ್ನ ತೀರವನ್ನು ಆಶ್ರಯಿಸಿ ಬಂದವರಿಗೆ, ಅಮೃತ ಸದೃಶವಾದ ನಿನ್ನ ಜಲಪಾನ ಮಾಡುವವರಿಗೆ ಅತಿಶಯ ಸಂತೃಪ್ತಿಯನ್ನು ಕೊಡುವ ಸಾಮರ್ಥ್ಯ ನಿನ್ನಲ್ಲಿದೆ. ಅವರ ಸಾಧನೆ ತಪಸ್ಸಿನಿಂದ ಸಂತೃಪ್ತರಾಗಿ ಅವರಿಗೆ ಮೋಕ್ಷಲಕ್ಷ್ಮಿಯನ್ನು ಕರುಣಿಸುವ ಶಕ್ತಿಸಂಪತ್ತು ನಿನ್ನಲ್ಲಿದೆ ಎಂದು ನಾನು ಭಾವಿಸಿದ್ದೇನೆ." ಎಂಬುದಾಗಿ, ಪಂಡಿತರಾಜ ಜಗನ್ನಾಥ ಕವಿಯು, ತನ್ನ 'ಗಂಗಾಲಹರಿ'ಯಲ್ಲಿ ಆತ್ಮವಿಶ್ವಾಸದಿಂದ ನುಡಿದಿದ್ದಾನೆ.

ಸಂ. ವಾಕ್ಯ : 'जनानां आनन्दः परिहसति निर्वाणपदवीम् ।'

ಶ್ಲೋಕ 4 : " ಎಲೌ ಗಂಗಾಮಾತೆಯೇ, ವಿಶೇಷ ದಾನಧರ್ಮ ಗಳಿಂದಲೂ, ಧ್ಯಾನ ಮನನಾದಿಗಳಿಂದಲೂ, ಅನೇಕ–ಅಸಂಖ್ಯ ಯಜ್ಞ–ಯಾಗಾದಿಗಳಿಂದಲೂ ಧೃತಿಗೆಡದ ಮಾಡುವ ತಪಸ್ಸಿನಿಂದಲೂ ಯಾವುದು ಅಲಭ್ಯವೋ, ಚಿಂತಿಸಲಶಕ್ಯವೋ ಅಂಥ ಮೋಕ್ಷಪದವಿಯನ್ನು ಸರ್ವರಿಗೂ ಸಮಾನವಾಗಿ ಪ್ರದಾನಮಾಡುವವಳು ನೀನಾದ್ದುದರಿಂದ ನಿನಗೆ ಸಮಾನರನ್ನು ಈ ಬ್ರಹ್ಮಾಂಡದಲ್ಲಿ ನಾನು ಕಂಡಿಲ್ಲವು "– ಎಂಬುದಾಗಿ ಪಂಡಿತರಾಜ ಜಗನ್ನಾಥನು, ತನ್ನ 'ಗಂಗಾಲಹರಿ'ಯಲ್ಲಿ ಪ್ರಾರ್ಥಿಸಿದ್ದಾನೆ, ಗಂಗಾದೇವಿಯನ್ನು.

ಸಂ. ವಾಕ್ಯ : 'ಅತಸ್ತ್ವತ್ತುಲ್ಯಾ ಕೇನಾಪಿ ಸ್ತ್ವಮಿಹ ತುಲನೀಯಾ ಕಥಯ ನಃ ।'

ಶ್ಲೋಕ 5 : " ಎಲೌ ಗಂಗಾದೇವಿಯೆ, ಭೂಲೋಕದ ಜನರ ಕಷ್ಟ ಕಾರ್ಪಣ್ಯಗಳನ್ನು ದೂರ ಮಾಡಲೋಸುಗ, ಸ್ವರ್ಗಲೋಕದಿಂದ ಭೂಮಿಗೆ ಇಳಿದು ಬಂದು, ಶಂಕರನ ಜಟಾಜೂಟದಲ್ಲಿ ಬಂಧಿತಳಾಗಿ, ತದನಂತರ ಅಲ್ಲಿಂದ ಹೊರಹೊರಟು ನೀನು, ಆಸೆಯಿಲ್ಲದವರ ಮನಸ್ಸಿನಲ್ಲಿ ಆಸೆಯನ್ನುಂಟುಮಾಡತಕ್ಕ (ಆಶಾತೀತರಾದ, ಆಶಾವಿಷಗಳಿಗೆ ಪಕ್ಕಾಗದ) ನಿನ್ನ ಗುಣಾತಿಶಯಗಳ ಪರಿಣಾಮವು ಒಂದು ದೋಷವನ್ನೇ ಸೃಷ್ಟಿಸಿದಂತಾಗಿದೆ ಮೋಕ್ಷಾಪೇಕ್ಷಿಗಳು. ಮೋಕ್ಷವನ್ನು ತ್ಯಜಿಸಿ ನಿನ್ನ ಆಶ್ರಯದಲ್ಲೇ ಇದ್ದುಬಿಡಬೇಕೆಂದು ನಿರ್ಧರಿಸುವುದು ನಿನ್ನ ಗುಣಕ್ಕಿಂತ 'ದೋಷ'ವೇ ಹಾದೆಂದು ಹೇಳುತ್ತೇನೆ." ಎಂಬುದಾಗಿ ಪಂಡಿತರಾಜ ಜಗನ್ನಾಥ ಕವಿಯು, ತನ್ನ 'ಗಂಗಾಲಹರಿ'ಯಲ್ಲಿ ಅಂದಿದ್ದಾನೆ.

ಸಂ. ವಾಕ್ಯ : 'ಗುಣಾನಾಮೇವಾಯಂ ತವ ಜನನಿ ದೋಷಃ ಪರಿಣತಃ ।'

ಶ್ಲೋಕ 6 : " ಎಲೌ ಗಂಗಾಮಾತೆಯೆ, ಸ್ವಭಾವತಃ ಪರಿಶುದ್ಧವೂ ಪಾನಾಹ್ಲಾದಕರವೂ ಆಗಿರುವ ನಿನ್ನ ಜಲಸಂಪತ್ತುಗಳ ಮಹಿಮಾ ವಿಶೇಷವು ಈ ಬ್ರಹ್ಮಾಂಡದಲ್ಲಿ ಪ್ರಸಿದ್ಧವಾಗಿರುವುದಷ್ಟೆ! ಅಲ್ಲದೆ ವಿಲಕ್ಷಣವೂ ಹೌದು. ವೈಲಕ್ಷಣ್ಯಯುತವಾದ ಕಾಂತಿಯಿಂದ ಅರವತ್ತುಸಹಸ್ರ ಜನ ಸಗರಪುತ್ರರು ರೋಮಾಂಚನ ಹೊಂದಿ ಈಗಲೂ ನಿನ್ನನ್ನು ಸಂತೋಷ

ಮಾನಸರಾಗಿ ಸ್ವರ್ಗದಲ್ಲಿ ಪ್ರಶಂಸಿಸುತ್ತಿದ್ದಾರೆ."– ಎಂದು ಪಂಡಿತರಾಜ ಜಗನ್ನಾಥ ಕವಿಯು, ತನ್ನ 'ಗಂಗಾಲಹರಿ'ಯಲ್ಲಿ ಹೇಳಿದ್ದಾನೆ.

ಸಂ. ವಾಕ್ಯ : **'समासाद्याद्यापि स्फुटपुलकसान्द्राः सगरजाः ।'**

[ಸೂ : ಭಗೀರಥ ಮಹಾರಾಜನು, ಗಂಗೆಯನ್ನು ಹರಿಸಿ ಪಾತಾಳ ದಲ್ಲಿ ಬೂದಿಯಾಗಿದ್ದ ಅರವತ್ತುಸಹಸ್ರಜನ ಸಗರಪುತ್ರರಿಗೆ ಮೋಕ್ಷ ದೊರೆ ಯುವಂತೆ ಮಾಡಿದನು.]

ಶ್ಲೋಕ 7 : "ಎಲೌ ಗಂಗಾದೇವಿಯೆ, ಅಜ್ಞಾನವಶರಾಗಿ ನೀಚ ವಾಗಿ ಮಾಡಲ್ಪಟ್ಟ ಪಾಪವುಳ್ಳವರಾಗಿ, ಆ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲಾಶಿಸುವವರಿಗೆ ಕೂಡಲೇ ಅವರನ್ನು ಉದ್ಧಾರಮಾಡಲು ಮೂರು ಲೋಕಗಳಲ್ಲೂ (ಸ್ವರ್ಗ–ಮರ್ತ್ಯ–ಪಾತಾಳ) ನೀನು ಪ್ರವಾಹ ಗಳನ್ನು ಹರಿಸುವುದು ಪ್ರಸಿದ್ಧವಷ್ಟೆ !"– ಎಂಬುದಾಗಿ, ಪಂಡಿತರಾಜ ಜಗನ್ನಾಥ ಕವಿಯು, ತನ್ನ 'ಗಂಗಾಲಹರಿ'ಯಲ್ಲಿ ಒಕ್ಕಣಿಸಿದ್ದಾನೆ.

ಶ್ಲೋಕ 8 : "ಎಲೌ ಗಂಗಾಮಾತೆಯೆ, ಸಂರಕ್ಷಕರಿಲ್ಲದೆ ನಿರ್ವೀ ರ್ಯನಾದ ನಾನು, ಮೋಕ್ಷಲಕ್ಷ್ಮಿಪ್ರದಾಯಕಳಾದ, ಪ್ರಪಂಚವನ್ನು ಸಮುದ್ಧರಿಸುವ, 'ಸಿದ್ಧಿ' ಎಂಬ ಔಷಧರೂಪವಾದ ನಿನ್ನ ಅಮೃತಬಿಂದು ವನ್ನು ಪಡೆಯಲು, ಬಾಯಾರಿಕೆಯಿಂದ ವ್ಯಥೆಪಡುವ ಶಿಶುವಾಗಿ ನಿನ್ನ ಸಾನ್ನಿಧ್ಯವನ್ನು ಬಂದು ಸೇರಿದ್ದೇನೆ. ನೀನು, ನನಗೆ, ಹಿತವಾದುದು ಯಾವುದೋ ಅದನ್ನು ಕರುಣಿಸುವವಳಾಗು "– ಎಂದು, ಪಂಡಿತರಾಜ ಜಗನ್ನಾಥ ಕವಿಯು, ತನ್ನ 'ಗಂಗಾಲಹರಿ'ಯಲ್ಲಿ ಸ್ತೋತ್ರಮಾಡಿದ್ದಾನೆ.

ಸಂ. ವಾಕ್ಯ: **'शिशुः सम्प्राप्तस्त्वामहमिह विदध्याः समुचितम्।'**

ಶ್ಲೋಕ 9 : "ಎಲೌ ಗಂಗಾಜನನಿಯೆ, ಈ ಬ್ರಹ್ಮಾಂಡದಲ್ಲಿ ವಿಶಾಲವಾಗಿರತಕ್ಕ ಎರಡು ಕಣ್ಣುಗಳಿಂದ ನಿನ್ನ ಪ್ರವಾಹರೂಪವಾದ ದೇಹವನ್ನು ನೋಡದೇ ಹೋದಲ್ಲಿ ಕಣ್ಣಿದ್ದುದು ಸಾರ್ಥಕವಾಗುವುದೇನು? ನಿನ್ನನ್ನು ಸಂದರ್ಶಿಸಿ ಪಾವನವಾಗುವುದೇ ಕಣ್ಣಿರುವುದಕ್ಕೆ ಪ್ರಯೋಜನ.

ಮಾನವನು, ತನ್ನ ಎರಡು ಕಿವಿಗಳಿಂದ ನಿನ್ನ ಪ್ರವಾಹದ ಕಲಕಲನಿನಾದ ಧ್ವನಿಯನ್ನು ಕೇಳದೇ ಹೋದಲ್ಲಿ ಆ ಕಿವಿಗಳಿದ್ದೂ ಫಲವೇನು ? ನಿನ್ನ ಸಂದರ್ಶನದೊಂದಿಗೆ ನಿನ್ನ ಮಧುರ ನಿನಾದವನ್ನು ಕೇಳುವುದೂ ಕಿವಿಗಳಿಗೆ ಸಾರ್ಥಕತೆ 'ಯು – ಎಂದು ಪಂಡಿತರಾಜ ಜಗನ್ನಾಥಕವಿಯು, ತನ್ನ 'ಗಂಗಾಲಹರಿ'ಯಲ್ಲಿ ಹೇಳಿದ್ದಾನೆ.

ಸಂ. ವಾಕ್ಯ 'किमाभ्यामक्षिभ्यां किमिह नयनाभ्यां खलु फलम्।'

ಶ್ಲೋಕ 10 : " ಎಲೌ ಗಂಗಾಮಾತೆಯೆ, ಮಾನವರಿಗೆ ಇಹಪರ ಗಳ ಸೌಖ್ಯ ಅಪೇಕ್ಷಿತವೇ ಸರಿ. ಎಷ್ಟೋ ಜನರು, ಈ ಲೋಕದ ಸುಖ ವನ್ನು ಹೊಂದಿದವರಾಗಿದ್ದಾರೆ ; ಇನ್ನೂ ಎಷ್ಟೋ ಮಂದಿ ಪವಿತ್ರಾತ್ಮರೆ ನಿಸಿ ಪರಲೋಕ ಪ್ರಾಪ್ತಿಗಾಗಿ ಪ್ರಯತ್ನಿಸುತ್ತಿದ್ದಾರೆ. ನಿನ್ನ ಅನುಗ್ರಹ ದಿಂದ ಜಗನ್ನಾಥಕವಿಯು ನಿನ್ನಲ್ಲಿ ಇಡಲ್ಪಟ್ಟ ಎರಡೂ ಲೋಕಗಳ ಅಪೇ ಕ್ಷೆಯುಳ್ಳವನಾಗಿ ನಿನ್ನ ದಂಡೆಯಿಂದ ನಿನ್ನ ಮಡಿಲಲ್ಲಿ ಸುಖನಿದ್ರೆ ಮಾಡಲು ಬಯಸುವವನಾಗಿದ್ದೇನೆ " — ಎಂದು ಪಂಡಿತರಾಜ ಜಗನ್ನಾಥ ಕವಿಯು ತನ್ನ ' ಗಂಗಾಲಹರಿ'ಯಲ್ಲಿ ವಿನಯ ಪೂರ್ವಕವಾಗಿ ನಿವೇದಿಸಿದ್ದಾನೆ.

ಸಂ. ವಾಕ್ಯ : 'जगन्नाथः शश्वत्त्वयि निहितलोकद्वयभरः ।'

4. ಪ್ರಶ್ನೋತ್ತರ :

ಜಗನ್ನಾಥ ಕವಿಯು ಗಂಗೆಯನ್ನು ಏನೆಂದು ಸ್ತೋತ್ರಮಾಡಿದ್ದಾನೆ ? (ಸೂಚನೆ : ಶ್ಲೋಕಗಳ ಭಾವವಿವರಣೆಯನ್ನು ನೋಡಿರಿ)

5. ವ್ಯಾಕರಣಾಂಶಗಳು :

ಕ್ರಿಯಾರೂಪ : विदध्या:– ವಿ+ಧಾ ಧಾತು, ವಿಧಿಲಿಙ್‌ಲಕಾರ, ಮಧ್ಯಮ ಪುರುಷ, ಏಕವಚನ.

ಸಮಾಸಗಳು :

1) लीलाजनितजगत: — लीलया जनितं जगत् येन सः, तस्य (ತೃತೀಯಾ ತತ್ಪುರುಷ, ಬಹುವ್ರೀಹಿ)।

2) सुधासौंदर्यम् – सुधायाः सौंदर्यमिव सौंदर्यं यस्य तत् (ಬಹುವ್ರೀಹಿ)

3) विलोलद्वानीरम् — विलोलत् वानीरः यस्मिन् तत् विलोलद्वानीरम् (ಬಹುವ್ರೀಹಿ)

4) कृतक्षुद्रैनस्कान् – कृतं क्षुद्रं एनः यैः ते कृतक्षुद्रैनस्काः तान् (ಬಹುವ್ರೀಹಿ)

5) विगलितगतिः – विगलिता गतिः यस्य सः (ಬಹುವ್ರೀಹಿ)

6) लहरिलीलाकलकलः — लहरीणां लीलाः, ताभिः कलकलः (ಷಷ್ಠೀ, ತೃತೀಯಾ ತತ್ಪುರುಷ)

6. ಕಠಿಣ ಪದಗಳ ಅರ್ಥ :

खण्डपरशोः – ಈಶ್ವರನ वानीरः – ಬೆತ್ತ, सगरजाः – ಸಗರನ ಮಕ್ಕಳು
झटिति–ಬೇಗ श्रवण–ಕಿವಿ लोकार्थघटकाः – ಇಹಲೋಕದ ಆಸಕ್ತರು

## ಪಾಠ : 14 सुभाषितानि

### [ ಸುಭಾಷಿತಗಳು ]

1. ಅವತರಣಿಕೆ :

ಸಂಸ್ಕೃತದ 'ಸುಭಾಷಿತಗಳು' ಒಂದು ರೀತಿಯಲ್ಲಿ ಕನ್ನಡದಲ್ಲಿನ ಗಾದೆಯ ಮಾತುಗಳು.

"ಗಾದೆಗಳು ಮತ್ತು ಅನುಭವಿಗಳ ಅನುಭವನುಡಿಗಳು ಜೀವನದ ಮಸೆಗಲ್ಲು ; ವಿವೇಕದ ಒರೆಗಲ್ಲು"— ಶ್ರೀ ದ. ರಾ. ಬೇಂದ್ರೆ.

ಹುಟ್ಟು : "ಗಾದೆಗಳು– ಹಿರಿನುಡಿಗಳು ಯಾರೋ ಅನಾಮಧೇಯನ ಮನಸ್ಸಿನಲ್ಲಿ ತಟ್ಟನೆ ಹಾರಿದ ಕಿಡಿಗಳು" ಶ್ರೀ ರಾಮಾನುಜಂ

ಲಕ್ಷಣ : ಗಾದೆಗಳು ಮತ್ತು ಹಿರಿನುಡಿಗಳು ತೋರಿಬರುವ

ಸಾಮಾನ್ಯವಾದ ಮಾರ್ಗ ಅಂದರೆ ಸುಲಭವಾದುದರಿಂದ ಎಲ್ಲರೂ ಅನುಭ ವಿಸಬಹುದಾದ ಮಾರ್ಗವೆಂದರ್ಥ.

ಸಂ. ವಾಕ್ಯ : सामान्यं .... पन्थाः ।

ಶ್ಲೋಕ 13 : ಭರ್ತೃಹರಿಮಹಾಕವಿಯು, 'ಸುಜನಪದ್ಧತಿ' ಯಲ್ಲಿ ಹೀಗೆ ಹೇಳಿದ್ದಾನೆ : "ಸಜ್ಜನರ ಚರಿತ್ರೆಯನ್ನು ಇನ್ನೊಂದು ರೀತಿಯಿಂದ ವರ್ಣಿಸುತ್ತಾನೆ ದಾನಮಾಡಿದುದನ್ನು ಪ್ರಕಾಶಪಡಿಸಬಾರದೆಂದು ಶಾಸ್ತ್ರ ದಲ್ಲಿ ಹೇಳಿದೆ. ಅದರಂತೆ ಗುಟ್ಟಾಗಿ ದಾನಮಾಡುವುದು ಸಜ್ಜನರ ಸ್ವಭಾವ ಮನೆಗೆ ಬಂದಿರುವ ಅತಿಥಿಗಳನ್ನು ಸತ್ಕರಿಸಿ ತುಂಬಾ ಆದರ ತೋರಿಸು ತ್ತಾರೆ ಇತರರಿಗೆ ಉಪಕಾರ ಮಾಡಿದರೂ ಯಾರಿಗೂ ಹೇಳದೆ ತಮ್ಮನ್ನು ಹೊಗಳಿಕೊಳ್ಳದೆ ಮೌನದಿಂದ ಇರುತ್ತಾರೆ ಆದರೆ ಇತರರು ತಮಗೇ ನಾದರೂ ಅಲ್ಪ ಉಪಕಾರ ಮಾಡಿದರೂ ಅದನ್ನು ನಾಲ್ಕು ಜನರ ಎದುರು ಅಥವಾ ದೊಡ್ಡ ಸಭೆಯಲ್ಲಿಯೋ ಹೇಳಿ ಕೊಂಡಾಡುತ್ತಾರೆ. ಧನವಂತ ರಾಗಿದ್ದರೂ ಗರ್ವರಹಿತರಾಗಿರುತ್ತಾರೆ. ಇತರರು ಹೇಗೆ ವರ್ತಿಸಲಿ ಅದನ್ನು ಸ್ವಲ್ಪವೂ ನಿಂದಿಸುವುದಿಲ್ಲ. ಇತರರ ವಿಷಯವನ್ನು ಹೇಳುವ ಸ್ವಭಾವವೇ ಅವರಿಗಿರುವುದಿಲ್ಲ. ಇಂಥ ಉತ್ತಮ ಗುಣಗಳು ಅವರಿಗೆ ಯಾರ ಉಪ ದೇಶದಿಂದಲೂ ಬಂದಿರುವುದಿಲ್ಲ. ಸ್ವಭಾವದಿಂದಲೇ ಉತ್ತಮ ಗುಣ ಗಳನ್ನು ಹೊಂದಿ ಶೋಭಿಸುತ್ತಾರೆ."

ಸಂ. ವಾಕ್ಯ : सतां .... व्रतमिदम् ।

ಶ್ಲೋಕ 14 : ಭರ್ತೃಹರಿ ಮಹಾಕವಿಯು, 'ಪರೋಪಕಾರಪದ್ಧತಿ' ಯಲ್ಲಿ "ಅವರವರ ಕಾರ್ಯ ಸ್ವಭಾವಗಳಿಂದ ಮನುಷ್ಯರನ್ನು ಉತ್ತಮ, ಮಧ್ಯಮ, ಅಧಮ ಭೇದಗಳಿಂದ ಪರಿಗಣಿಸುತ್ತಾನೆ ಲೋಕದಲ್ಲಿ ಸಜ್ಜನರು ತಮ್ಮ ಪ್ರಯೋಜನವನ್ನು ಮೂಲೆಗೊತ್ತಿ ಕೇವಲ ಪರೋಪ ಕಾರದಲ್ಲಿಯೇ ತಲ್ಲೀನರಾಗಿರುತ್ತಾರೆ. ಇಂಥವರನ್ನೇ ಉತ್ತಮಪುರುಷ ರೆಂದೂ, ಸಜ್ಜನರೆಂದೂ ಕರೆಯುತ್ತಾರೆ. ಇನ್ನು ಕೆಲವರು ತಮ್ಮ ಪ್ರಯೋ ಜನಕ್ಕೆ ಧಕ್ಕೆಯಿಲ್ಲದಂತೆ ಅಂದರೆ ತಮ್ಮ ಸ್ವಾರ್ಥವನ್ನು ಸಾಧಿಸಿಕೊಳ್ಳುತ್ತಾ

ಇತರರ ಪ್ರಯೋಜನವನ್ನು ನೆರವೇರಿಸಿ ಕೊಡುತ್ತಾರೆ. ಇತರ ಕೆಲವರು ತಮ್ಮ ಇಷ್ಟಾರ್ಥವನ್ನು ನೆರವೇರಿಸಿಕೊಳ್ಳಲು ಪರರ ಹಿತವನ್ನು ನಾಶಮಾಡುತ್ತಾರೆ. ಇಂಥವರೇ ಅಧಮರು ಇವರನ್ನು ಪುರುಷಾಕಾರದ ರಾಕ್ಷಸರೆಂದು ಕರೆಯುತ್ತಾರೆ. ಇನ್ನು ಕೆಲವರಾದರೋ ಸ್ವಾರ್ಥ ಪರಾರ್ಥವೂ ಇಲ್ಲದೇ ಯಾವಾಗಲೂ ಇತರರ ಒಳಿತನ್ನು ಹಾಳುಮಾಡುವುದರಲ್ಲಿಯೇ ಆಸಕ್ತರಾಗಿರುತ್ತಾರೆ. ಇಂಥವರನ್ನು ಏನೆಂದು ಕರೆಯುವುದೋ ತಿಳಿಯದೆಂದು ಕವಿಯು ಖೇದದಿಂದ ತಿಳಿಸುತ್ತಾನೆ.”

ಸಂ. ವಾಕ್ಯ : 1) एते सत्पुरुषाः .... ये ।
2) ये तु घ्नन्ति .... जानीमहे ।

ಶ್ಲೋಕ 15 : ಭರ್ತೃಹರಿಮಹಾಕವಿಯು, ‘ ಪರೋಪಕಾರಪದ್ಧತಿ’ ಯಲ್ಲಿ ಹೀಗೆ ಹೇಳಿದ್ದಾನೆ : “ ಹಾಲು ನೀರಿನ ದೃಷ್ಟಾಂತದಿಂದ ಸಜ್ಜನರ ಸ್ನೇಹವನ್ನು ವ್ಯಕ್ತಪಡಿಸುತ್ತಾನೆ. ಹಾಲಿನೊಡನೆ ನೀರು ಬೆರೆತಾಗ ಹಾಲು ತನ್ನಲ್ಲಿ ಅದು ಐಕ್ಯಹೊಂದಿರುವುದರಿಂದ, ತನ್ನಲ್ಲಿರುವ ಮಾಧುರ್ಯ, ಧಾವಳ್ಯ ಮುಂತಾದ ಎಲ್ಲಾ ಗುಣಗಳನ್ನೂ ನೀರಿಗೆ ಕೊಡುತ್ತದೆ. ಆಗ ನೀರು ಮಿತ್ರನ ಕಾರ್ಯದಿಂದ ಕೃತಜ್ಞನಾಗಿ ಹಾಲು ಕುದಿಯುವಾಗ ಅದರ ಸಂತಾಪ ತಾಳಲಾರದೆ ತಾನು ಬೆಂಕಿಗೆ ಧುಮುಕಿ ಶರೀರ ಕಳೆದುಕೊಳ್ಳಲು ಇಚ್ಛೆಪಡುತ್ತಾನೆ. ಆಗ ಹಾಲೂ ಕೂಡ ಮಿತ್ರನ ಆ ಕಾರ್ಯ ನೋಡಿ ಅವನ ದುಃಖವನ್ನು ನೋಡಿ ಸಹಿಸಲಾರದೆ ತಾನೂ ಬೆಂಕಿಗೆ ಧುಮುಕಬೇಕೆಂದು ತವಕಪಡುತ್ತದೆ. ಮಧ್ಯದಲ್ಲಿ ಸ್ವಲ್ಪ ನೀರು ಹಾಕಿದಾಗ ಸ್ನೇಹಿತನು ಬಂದನೆಂದು ತಾನೂ ಶಾಂತವಾಗುತ್ತದೆ. ಸಜ್ಜನರ ಸ್ನೇಹವು ಹೀಗೆ ಒಬ್ಬರಿಗೊಬ್ಬರಿಗೆ ವ್ಯಸನ ಬಂದಾಗ ತಮಗೆ ಬಂದಂತೆಯೆ ತಿಳಿದು ಸಹಿಸಲಾರದೆ ವ್ಯಥೆಪಟ್ಟು ಸಹಕರಿಸುತ್ತಾರೆ.”

ಸಂ. ವಾಕ್ಯ : युक्तं तेन .... पुनस्त्वीदृशी ।

ಶ್ಲೋಕ 16 : ಭರ್ತೃ... ‘ಧೈರ್ಯಪದ್ಧತಿ’ಯಲ್ಲಿ ಹೀಗೆ ಹೇಳಿದ್ದಾನೆ :

"ಲೋಕದಲ್ಲಿ ನೀಚಜನರು ಮೊದಲೇ ಔದಾಸೀನ್ಯದಿಂದ ಮುಂದೆ ವಿಘ್ನವುಂಟಾಗುವುದೆಂದು ಹೆದರಿ ಕಾರ್ಯವನ್ನು ಪ್ರಾರಂಭಿಸುವುದೇ ಇಲ್ಲ. ಇವರಿಂದ ಉತ್ತಮರಾದ ಮಧ್ಯಮ ತರಗತಿಯ ಜನರು ಕೆಲಸಕ್ಕೆ ಕೈ ಹಾಕುತ್ತಾರೆ ಆದರೆ ಮಧ್ಯದಲ್ಲಿ ಸ್ವಲ್ಪ ವಿಘ್ನ ಒದಗಿದೊಡನೆಯೇ ಹೆದರಿ ಅರ್ಧದಲ್ಲಿಯೇ ಕೈ ಬಿಡುತ್ತಾರೆ. ಆದರೆ ಶೀಲಶೌರ್ಯಾದಿ ಶ್ರೇಷ್ಠಗುಣಗಳಿಂದ ವಿರಾಜಿಸುವ ಸತ್ಪುರುಷರು ಕಾರ್ಯವನ್ನಾರಂಭಿಸಿದಾಗ ಮಧ್ಯದಲ್ಲಿ ಅನೇಕ ವಿಘ್ನಗಳು ಒದಗಿ ತುಂಬಾ ಕಷ್ಟವನ್ನು ಹೊಂದಿದರೂ ನಿರಾಶರಾಗದೆ ಫಲ ಸಿಗುವವರೆಗೆ ಕಷ್ಟದಿಂದ ಮಾಡಿ ಪೂರೈಸುತ್ತಾರೆ. ಹಿಂದೆ ಹೇಳಿದ ದೇವತೆಗಳೂ ಹಾಗಿದ್ದುದರಿಂದ ವಿಘ್ನಾದಿಗಳು ಉಂಟಾದರೂ ಹೆದರದೆ ಅಮೃತ ಸಿಗುವವರೆಗೆ ಸಮುದ್ರಮಥನ ಮಾಡಿರುತ್ತಾರೆ."

ಸಂ. ವಾಕ್ಯ : प्रारब्धमुत्तमगुणा .... परित्यजन्ति ।

ಶ್ಲೋಕ 17 : ಭರ್ತೃಹರಿ ... 'ದೈವಪದ್ಧತಿ' . ಹೇಳಿದ್ದಾನೆ.

"ಮಾನವರು, ತಮ್ಮ ಬುದ್ಧಿ ಬಲದಿಂದ ಹಿಡಿಯಲು ಅಸಾಧ್ಯವಾದ ಬಲಶಾಲಿಯಾದ ಆನೆಯನ್ನೂ ಕಟ್ಟಿ ಪಳಗಿಸುತ್ತಾರೆ. ಕಠೋರವಾದ ವಿಷವುಳ್ಳ ಸರ್ಪವನ್ನೂ ಬಂಧಿಸುತ್ತಾರೆ. ಶೀಘ್ರಗಮನವುಳ್ಳ ಪಕ್ಷಿಗಳಿಗೂ ಬಂಧನ ತಪ್ಪಿರುವುದಿಲ್ಲ. ಜಗತ್ತನ್ನು ಬೆಳಗಿಸುವ ಸೂರ್ಯ ಚಂದ್ರರಿಗೂ ರಾಹುವಿನ ಪೀಡೆ ಆಗಾಗ ಬರುತ್ತದೆ. ಬುದ್ಧಿವಂತರಾದ ಸಜ್ಜನರಿಗೆ ದಾರಿದ್ರ್ಯ. ಇದನ್ನೆಲ್ಲಾ ಪರಿಶೀಲಿಸಿದರೆ ಎಲ್ಲದಕ್ಕೂ ದೈವವೇ ಬಲವೆಂದು ತಿಳಿಯುತ್ತದೆ."

ಸಂ. ವಾಕ್ಯ : विधिरहो .... मतिः ।

ಶ್ಲೋಕ 18 : ಓರ್ವ ಸುಭಾಷಿತಕಾರನು, 'ಕೃತಜ್ಞತಾ' ಎಂಬ ಭಾಗದಲ್ಲಿ ಹೀಗೆ ಹೇಳಿದ್ದಾನೆ :

"ಈ ಲೋಕದಲ್ಲಿ ಮಾಡಿದ ಕಾರ್ಯಕ್ಕೆ ಕೊನೆ ಇರಲೇ ಬೇಕು. ಆರಂಭ ಮತ್ತು ಅಂತ್ಯ ಪ್ರತಿಯೊಂದು ಕಾರ್ಯದ ಮೊದಲು ಮತ್ತು ಕೊನೆಯೆಂಬ ತುದಿಗಳು. ಗುಣಸಹಿತವೋ-ಗುಣರಹಿತವೋ (ಯೋಗ್ಯ-ಅಯೋಗ್ಯ

ಯುಕ್ತ-ಅಯುಕ್ತ) ಆದ ಕಾರ್ಯವನ್ನು ಪಂಡಿತನು ಆರಂಭಿಸಿ ಕೊನೆಗಾಣಿಸುತ್ತಾನೆ. ಆದರೆ ಅವಸರ-ಆತುರದಿಂದ ಮಾಡುವ ಕಾರ್ಯ ಮಾತ್ರ ತೊಂದರೆಯಿಂದ ಕೂಡಿದ್ದು, ಹೃದಯಕ್ಕೆ ನೋವನ್ನುಂಟುಮಾಡುವಂಥದು, ಅಲ್ಲದೆ ಶುಭವನ್ನು ಅದರಲ್ಲಿ ಕಾಣಲು ಸಾಧ್ಯವಿಲ್ಲ. ಮಹಾಕವಿ ಭಾರವಿಯು,

**'सहसा विदधीत न क्रियां, अविवेकः परमापदां पदम्'**
ಎಂದು ಹೇಳಿರುವುದು (ಯೋಚಿಸದೇ ಕೆಲಸ ಮಾಡುವುದು ಆಪತ್ತುಗಳಿಗೆ ಎಡೆಯು) ಸಮೀಚೀನವೇ ಆಗಿದೆ."

ಸಂ. ವಾಕ್ಯ : **भवति .... विपाकः ।**

ಶ್ಲೋಕ 19 : ಓರ್ವ ಸುಭಾಷಿತಕಾರನು 'ಕೃತಜ್ಞತಾ' ಎಂಬ ಭಾಗದಲ್ಲಿ ಹೀಗೆ ಹೇಳಿದ್ದಾನೆ : " ಈ ವಿಶ್ವದಲ್ಲಿ, ಮಾಡಿದ್ದಕ್ಕೆ ತಕ್ಕ ಫಲ ದೊರೆತೇ ದೊರೆಯುತ್ತದೆ; ತಪ್ಪುವುದಿಲ್ಲ. ('ಮಾಡಿದ್ದುಣ್ಣೋ ಮಹಾರಾಯ' 'ಬಿತ್ತಿದ್ದಲ್ಲಿ ಬೆಳೆಯು'ಂಟು) ನೀರಿನಲ್ಲಿ ಮುಳುಗಲಿ, ಮೇರುಶಿಖರವೇರಲಿ, ಯುದ್ಧದಲ್ಲಿ ಶತ್ರುವನ್ನು ಜಯಿಸಲಿ, ವ್ಯಾಪಾರ, ಕೃಷಿ, ಸೇವಾಕಾರ್ಯ ಮೊದಲಾದ ವಿದ್ಯೆ-ಕಲೆಗಳು ಬೋಧಿಸಲ್ಪಡಲಿ, ಪಕ್ಷಿಯಂತೆ ವಿಶಾಲ ಆಕಾಶದಲ್ಲಿ ಹಾರಲಿ — ಈ ಎಲ್ಲಾ ಕಾರ್ಯದಲ್ಲಿ ವಿಶೇಷವಾದ ಪ್ರಯತ್ನ ಮಾಡಿದಲ್ಲಿ ಕರ್ಮಾನುಸಾರ ತಕ್ಕ ಫಲ ದೊರೆಯದೇ ಇರುವುದಿಲ್ಲ. ಮಾಡಿದ್ದಕ್ಕೆ ತಕ್ಕ ಫಲವಿದ್ದೇ ಇದೆ. ಓರ್ವ ಮಹಾಕವಿಯ ಸಿರಿನುಡಿ ಹೀಗಿದೆ

**'यदभावी न तद्भावि, भावि चेत् न तदन्यथा'**
ಆಗದಿರುವುದು ಆಗುವುದೇ ಇಲ್ಲ, ಆಗುವಂಥದು ನಿಲ್ಲುವುದಿಲ್ಲವು,"

ಸಂ. ವಾಕ್ಯ : **नाभाव्यं .... कुतः ?**

ಶ್ಲೋಕ 20 : ಓರ್ವ ಸುಭಾಷಿತಕಾರನು, 'ಕೃತಜ್ಞತಾ' ಎಂಬ ಭಾಗದಲ್ಲಿ ಹೀಗೆ ಹೇಳಿದ್ದಾನೆ : " ಈ ಲೋಕದಲ್ಲಿ ಸತ್ಪುರುಷರು ಕೃತಜ್ಞರಾಗಿರುತ್ತಾರೆ. ಈ ಮಾತಿಗೆ ಪ್ರಕೃತಿಯೇ ಸಾಕ್ಷಿ. ಹೂವಿನ ಒಂದು ಗಿಡಕ್ಕೆ ನೀರೆರೆದರೆ ಅದು ಹೂ ಕೊಡುತ್ತದೆ. ನಾಯಿಗೆ ಅನ್ನ ಹಾಕಿದರೆ

ಬಾಲವಲ್ಲಾಡಿಸಿ ತನ್ನ ಕೃತಜ್ಞತೆಯನ್ನು ಸೂಚಿಸುತ್ತದೆ. ಮಾಡಿದ ಉಪಕಾರದ ಸ್ಮರಣೆಯಿಲ್ಲದವರು ನೀಚರೇ ಸರಿ. ತೆಂಗಿನ ಸಸಿ ನೆಡುತ್ತೇವೆ. ಅದಕ್ಕೆ ನೀರೆರೆದು ಬೆಳೆಸುತ್ತೇವೆ. ಅದು, ತನ್ನ ತಲೆಯ ಮೇಲೆ ಎಳೆ ನೀರಿನ ಗೊಂಚಲುಗಳನ್ನು ಧರಿಸಿ ತನಗೆ ನೀರೆರೆದವರಿಗೆ ಅವನ್ನು ಕೊಟ್ಟು ತನ್ನ ಉಪಕಾರಸ್ಮರಣೆಯನ್ನು ಅಭಿವ್ಯಕ್ತಿಸುತ್ತದೆ. ಅಷ್ಟೇ ಅಲ್ಲದೆ ಗಿಡ ನೆಟ್ಟ ಮನೆಯವರಿಗೆ ತಲೆ ತಲಾಂತರದವರೆಗೆ ಫಲ ನೀಡುತ್ತಿರುತ್ತದೆ ಕೃತಜ್ಞತೆಗೆ ಇದಕ್ಕಿಂತ ಮಿಗಿಲಾದ ಬೇರೇನು ಉದಾಹರಣೆ ಬೇಕು !”

ಸಂ. ವಾಕ್ಯ : न हि .... क्षिपन्ति ।

ಶ್ಲೋಕ 21 : “ಲೋಕದಲ್ಲಿ, ಮಾಡುವ ಕಾರ್ಯಕ್ಕೆ ಫಲ ದೊರೆಯುತ್ತದೆ ; ಮಾಡುವ ಕೆಲಸಕ್ಕೆ ಕೊನೆಯೊಂದು ಇರಲೇಬೇಕು. ಮಥನ ಮಾಡುವುದರಿಂದ ಕಟ್ಟಿಗೆಯಿಂದ ಬೆಂಕಿಯು ಉಂಟಾಗುತ್ತದೆ. ಭೂಮಿಯನ್ನು ಅಗೆದಲ್ಲಿ ನೀರು ಲಭ್ಯವಾಗುತ್ತದೆ. ಉತ್ಸಾಹಯುಕ್ತ ಮನುಷ್ಯರಿಗೆ ಅಸಾಧ್ಯವಾದುದು ಯಾವುದೂ ಇಲ್ಲ. ಕ್ರಮವಾಗಿ ಪ್ರಾರಂಭಿಸಿ ಮಾಡಲ್ಪಟ್ಟ ಪ್ರಯತ್ನಗಳು ಫಲಿಸಿಯೇ ತೀರುತ್ತವೆ.”

ಸಂ. ವಾಕ್ಯ : मार्गारब्धाः .... फलन्ति ।

ಶ್ಲೋಕ 22 : “ಈ ಜಗತ್ತಿನಲ್ಲಿ, ಓದಿದ (ಅಧ್ಯಯನ ಮಾಡಿದ) ವಿದ್ಯೆ ಸತತಾಲೋಡನವಿಲ್ಲದಿದ್ದಲ್ಲಿ ಕ್ಷಯಿಸಿಹೋಗುತ್ತದೆ; ಭೂಮಿಯಲ್ಲಿ ಸ್ಥಿರವಾಗಿ ಊರಿ ನಿಂತಿರುವ ವೃಕ್ಷಗಳೂ ಕಾಲದ ಹೊಡೆತಕ್ಕೆ ಸಿಕ್ಕಿ ಉರುಳಿ ಹೋಗುತ್ತವೆ. ದೊಡ್ಡ ನೀರಿನ ಜಲಾಶಯಗಳೂ ಬರಗಾಲ ಬಂದಲ್ಲಿ ಒಣಗಿಹೋಗಬಹುದು. ಆದರೆ ಹೋಮಮಾಡಿದ ಯಜ್ಞಫಲ ಮತ್ತು ಮಾಡಿದ ದಾನಫಲ ಶಾಶ್ವತವಾಗಿ ನಿಲ್ಲುತ್ತವೆ” ಎಂದು ಭಾಸ ಮಹಾಕವಿ ಅಂದಿದ್ದಾನೆ.

ಸಂ. ವಾಕ್ಯ : हुतं च दत्तं च .... तिष्ठति ।

ಶ್ಲೋಕ 23 : “ವಿಶ್ವದಲ್ಲಿ, ಮಾನವನು ಯಾವುದೇ ಕಾರ್ಯವನ್ನೂ ಹಿಂದುಮುಂದೆ ನೋಡದೆ-ಪರ್ಯಾಲೋಚಿಸದೆ ಮಾಡಲೆತ್ನಿಸ

ಬಾರದು. ಏಕೆಂದರೆ ಅವಿವೇಕವು ಆಪತ್ತುಗಳಿಗೆ ತೌರುಮನೆಯು. ಯಾವನು, ಚೆನ್ನಾಗಿ ಯೋಚಿಸಿ ಕಾರ್ಯಮಾಡುತ್ತಾನೋ ಅವನಿಗೆ ಎಲ್ಲ ಸಾಫಲ್ಯಗಳೂ, ಸಂಪತ್ತುಗಳೂ ತಾವಾಗಿಯೇ ಬಂದು ಸೇರುತ್ತವೆ" ಎಂಬುದಾಗಿ ಭಾರವಿಮಹಾಕವಿಯು, ತನ್ನ 'ಕಿರಾತಾರ್ಜುನೀಯ'ದಲ್ಲಿ ಧರ್ಮರಾಜನ ಮೂಲಕ ಭೀಮನಿಗೆ ಹೇಳಿಸಿದ್ದಾನೆ.

ಸಂ. ವಾಕ್ಯ : सहसा .... सम्पदः ।

ಶ್ಲೋಕ 24 : "ಮಹಾಪ್ರಾಜ್ಞನಾದ ಗುರು ತನ್ನಲ್ಲಿದ್ದ ಪ್ರಾಜ್ಞತೆ ಪಾಂಡಿತ್ಯವನ್ನು ಯೋಗ್ಯ ಶಿಷ್ಯನಲ್ಲಿ ತುಂಬಿದ್ದೇ ಆದರೆ— ಗುರುಶಿಷ್ಯರಿಬ್ಬರೂ ಕೀರ್ತಿಭಾಜನರೇ ಆಗುತ್ತಾರೆ. ಸಮಾಜದಲ್ಲಿ ಅಗ್ರಸ್ಥಾನ ಹಾಗೂ ಉಚ್ಚಸ್ಥಾನವನ್ನು ಪಡೆಯುತ್ತಾರೆ" ಎಂದು ಕವಿಕುಲಗುರು ಕಾಳಿದಾಸನು ಅಂದಿದ್ದಾನೆ.

ಸಂ. ವಾಕ್ಯ : यस्योभयं .... एव ।

4. ಪ್ರಶ್ನೋತ್ತರ :

1) ಸುಭಾಷಿತ ಪ್ರಶಂಸೆಯನ್ನು ಮಾಡಿರಿ.

ಉತ್ತರ : 1 ರಿಂದ 5 ಶ್ಲೋಕಗಳ ಭಾವವಿವರಣೆಯನ್ನು ಬರೆಯಿರಿ.

2) ಭರ್ತೃಹರಿಯು, ಮೂರ್ಖಪದ್ಧತಿ, ವಿದ್ವತ್ಪದ್ಧತಿ, ಅರ್ಥಪದ್ಧತಿ, ಸುಜನಪದ್ಧತಿ, ಪರೋಪಕಾರಪದ್ಧತಿ, ಧೈರ್ಯಪದ್ಧತಿ, ದೈವಪದ್ಧತಿ— ಇವುಗಳಲ್ಲಿ ಪ್ರತಿಪಾದಿಸಿದ ತತ್ವಗಳೇನು ? (ಯಾವುದಾದರೂ ಎರಡನ್ನು ವಿವರಿಸಿರಿ)

ಉತ್ತರ : ಆಯಾ ಭಾಗದ ಭಾವವಿವರಣೆಯನ್ನು ಬರೆಯಿರಿ.

5. ವ್ಯಾಕರಣಾಂಶಗಳು :

1) ಕ್ರಿಯಾರೂಪಗಳು : 1) क्षीयते– ಕ್ಷೀ ಧಾತು, ಲಟ್ ಲಕಾರ, ಪ್ರಥಮ ಪುರುಷ, ಏಕವಚನ. 2) मन्यामहे– ಮನ್ ಧಾತು, ಲಟ್ ಲಕಾರ, ಉತ್ತಮ ಪುರುಷ, ಬಹುವಚನ. 3) तनोति– ತನ್

ಧಾತು, ಲಟ್ ಲಕಾರ, ಪ್ರಥಮ ಪುರುಷ, ಏಕವಚನ. 4) जानीमहे- ಜ್ಞಾ ಧಾತು, ಲಟ್ ಲಕಾರ, ಉತ್ತಮ ಪುರುಷ, ಬಹುವಚನ 5) शाम्यति- ಶಮ್ ಧಾತು, ಲಟ್ ಲಕಾರ, ಪ್ರಥಮ ಪುರುಷ, ಏ. ವ. 6) प्रारभ्यते- ಪ್ರ+ಆ+ರಭ್ ಧಾತು, ಕರ್ಮಣಿ ಲಟ್ ಲಕಾರ, ಪ್ರ. ಪುರುಷ, ಏಕವಚನ. 7) ददति- ದಾ ಧಾತು, ಲಟ್ ಲಕಾರ, ಪ್ರಥಮ ಪುರುಷ, ಬಹುವಚನ. 8) विदधीत- ವಿ+ದಧ್ ಧಾತು, ವಿಧಿಲಿಙ್ ಲಕಾರ, ಪ್ರಥಮ ಪುರುಷ, ಏಕವಚನ.

2) ಸಮಾಸಗಳು :

1) अज्ञान्- न ज्ञाः अज्ञाः तान् अज्ञान् (ನಞ್ ತತ್ಪುರುಷ)।

2) बालमृणालतन्तुभिः- बालानि मृणालानि तानि एव तन्तवः तैः (ಕರ್ಮಧಾರಯ)

3) क्षाराम्बुधेः - क्षारस्य अम्बुधिः तस्य ಷಷ್ಠೀ ತತ್ಪುರುಷ

4) सुधास्यन्दिभिः- सुधां स्यन्दन्ते इति सुधास्यन्दिनः, तैः (ದ್ವಿತೀಯಾ ತತ್ಪುರುಷ, ಬಹುವ್ರೀಹಿ)

5) अनुपहतविधिः- न उपहता अनुपहता विधिः यस्मिन् (ನಞ್ ತತ್ಪುರುಷ, ಬಹುವ್ರೀಹಿ)

6) उत्तमगुणाः- उत्तमा गुणाः येषां ते (ಬಹುವ್ರೀಹಿ)

7) निहितभाराः- निहितः भारः येषु ते (ಬಹುವ್ರೀಹಿ)

8) सुबद्धमूलाः- सुष्ठु बद्धं मूलं येषां ते (ಬಹುವ್ರೀಹಿ)

3) ರೂಪ ಗುರುತಿಸುವುದು :

अम्भसि- ನಪುಂಸಕ ಲಿಂಗ ಸಪ್ತಮೀ ಏಕವಚನ.

6. ಕಠಿಣ ಪದಗಳ ಅರ್ಥ :

मण्डनम्-ಅಲಂಕಾರ व्याल- ಆನೆ, ಸರ್ಪ बुधजनसकाशात्- ಪಂಡಿತರ ಹತ್ತಿರದಿಂದ स्तोक - ಅಲ್ಪ परार्थघटकाः - ಪರೋಪಕಾರ ನಿರು पयसा- ಹಾಲಿನಿಂದ, ನೀರಿನಿಂದ सहसा-ತತ್‌ಕ್ಷಣ

## ಪಾಠ 15 'रम्यता' तथा 'ताजमहल्'

## [ 'ರಮ್ಯತೆ' ಮತ್ತು 'ತಾಜಮಹಲ' ]

1. ಅವತರಣಿಕೆ :

'ಸೌಂದರ್ಯ', (ರಮಣೀಯತೆ) ಅಪಾರ ಅರ್ಥ, ಅಭಿಪ್ರಾಯ, ವ್ಯಾಖ್ಯಾನವುಳ್ಳ ಮಾತು. ಇದು ಅನುಭವಗಮ್ಯ ; ವರ್ಣಿಸಲಸದಳ. ಈ 'ಸೌಂದರ್ಯ'ವನ್ನು 'ತಾಜಮಹಲ್' ನಲ್ಲಿ ನೋಡಬಹುದಾಗಿದೆ

2. ಶ್ಲೋಕ-ಭಾವ ವಿವರಣೆ : (ಸಂದರ್ಭ ವಾಕ್ಯ ಸಹಿತ)

1. रम्यता —

ಶ್ಲೋಕ 1 : ರಮಣೀಯತೆಯನ್ನು, ವ್ಯಾಖ್ಯಾನಿಸುತ್ತ ಶ್ರೀ ಕೆ. ಟಿ ಪಾಂಡುರಂಗಿಯವರು ಇಂತು ಒಕ್ಕಣಿಸಿದ್ದಾರೆ : "ಸೃಷ್ಟಿಕರ್ತನು, ತನ್ನ ಸೃಷ್ಟಿಸೌಂದರ್ಯವನ್ನು ಶೃಂಗರಿಸಲು–ಸಂವರ್ಧಿಸಲು ರಮ್ಯತೆಯನ್ನು ಮೊದಲು ಸೃಷ್ಟಿಸಿದನು. 'ಕವಿರ್ಮನೀಷೀ ಪರಿಭೂಃ ಸ್ವಯಂಭೂಃ' ಎಂಬಂತೆ ಮೊದಲಿಗೆ ಕವಿವಾಣಿಯನ್ನು ರಚಿಸಿದನು. ಈ ಕವಿವಾಣಿಯು, ರಸಿಕಮಾನಸರ ಮನೋಲ್ಲಾಸಕ್ಕಾಗಿ ನಿರ್ಮಿಸಲ್ಪಟ್ಟದ್ದಾಗಿದೆ. 'ಕವಯಃ ಕ್ರಾಂತದರ್ಶಿನಃ' ಎಂಬಂತೆ ವಿಶ್ವಗರ್ಭದ ರಹಸ್ಯವನ್ನು ಭೇದಿಸುತ್ತದೆ. ಇದರಿಂದ ಬೇರಾದುದು ಮತ್ತಾವುದೂ ಇಲ್ಲ. ಈ ಎಲ್ಲದರ ಹಿನ್ನೆಲೆಯಲ್ಲಿ ರಮ್ಯತೆಯು ರಮಿಸುತ್ತದೆ."

ಸಂ. ವಾಕ್ಯ : 'विघटयतु रहस्यं कोऽपि धन्यो महान्यः ।'

ಶ್ಲೋಕ 2 : [ ರಮಣೀಯತೆಯನ್ನು ... ಒಕ್ಕಣಿಸಿದ್ದಾರೆ ]

"ರಮ್ಯತೆಯ ಉಗಮಸ್ಥಾನವು ಯಾವದಿರಬಹುದು ! ಎಂತಿರಬಹುದು ! ಬಹುಶಃ ಉದ್ದವಾದ ಆಗಸವೆಂಬ ಸಮುದ್ರದ ಮಧ್ಯೆ ಸಂಜನಿತ (ಉತ್ಪನ್ನ) ವಾಗುವ ಇಂದ್ರಧನುಸ್ಸೇ ಇದಿರಬಹುದೆ ? ವಸಂತ

ಋತುವಿನಲ್ಲಿ ವಿಕಸಿತಪುಷ್ಪರಾಜಿಗಳ ಉದ್ಯಾನವಾಟಿಕೆಗಳಲ್ಲಿ ಓಡಾಡುವ, ಬಾಡುಂಡು ಓಲಾಡುವ ದುಂಬಿಗಳೇ ಇರಬಹುದೆ ! ಪ್ರಿಯನ ಪಾದಾರವಿಂದಗಳಲ್ಲಿ ಪ್ರಣಮಿಸುವಾಗ ಪ್ರಿಯನನ್ನು ಪ್ರಿಯತಮೆಯು ಈಕ್ಷಿಸುವ ಕುಡಿನೋಟವಿರಬಹುದೆ ! ರಸಿಕಮಾನಸದ ಕರ್ಣಗಳಲ್ಲಿ ಕೇಳಿಬರುವ ಕಾವ್ಯಸಂಗೀತವಿರಬಹುದೆ ! ಇದನ್ನು ಏನೆಂದು ಬಣ್ಣಿಸೋಣ ? "

ಸಂ. ವಾಕ್ಯ : 1) 'रमणचरणपातोऽपाङ्गपातस्य एकः !'

2) 'कविसहृदयजुष्टो रस्य एषोऽथ सृष्टः ?'

ಶ್ಲೋಕ 3 : [ ರಮ್ಯತೆಯನ್ನು .. ಒಕ್ಕಣಿಸಿದ್ದಾರೆ ]

" ವೇದಾಧ್ಯಯನದಿಂದ ಸಂಸ್ಕರಿಸಲಾದ ಬೌದ್ಧಿಕ ಸಂಪತ್ತುಳ್ಳ ಕವಿಶ್ರೇಷ್ಠ ಕಾಳಿದಾಸನು, ಮನೋಹರವಾದ ರೂಪವನ್ನು ಸೃಷ್ಟಿಸಿ, 'ಇದೇನೆಂದು ಕೇಳಿದನೋ ಏನೋ !' ಹೇಳುವವರಾರು ? ಕಾವ್ಯವಾಣಿಯಿಂದ ರಸಿಕ ಜಗತ್ತಿಗೆ ಸಂತೋಷವನ್ನುಂಟುಮಾಡತಕ್ಕ ಕಾಳಿದಾಸ ಮಹಾಕವಿಯು, ಮನೋಹಾರಿಯೂ, ಗುಣಯುತಳೂ, ರೂಪಸಂಪನ್ನಳೂ ಆದ ಸುಪುತ್ರಿಯನ್ನು ಕಂಡು ಹರ್ಷಿಸಿದನೋ ಏನೋ ! ಊಹಿಸುವವರಾರು ? "

ಸಂ. ವಾಕ್ಯ : 'कविसहृदयरूपो सृष्टवान् जुष्टवांश्च ।'

ಶ್ಲೋಕ 4 : [ ರಮಣೀಯತೆಯನ್ನು .. ಒಕ್ಕಣಿಸಿದ್ದಾರೆ ]

" ಸೃಷ್ಟಿಕರ್ತನಾದ ಬ್ರಹ್ಮನು, ತನ್ನ ಸೃಷ್ಟಿಕಾಲದಲ್ಲಿ, ಸಹೃದಯ ಸಜ್ಜನ ಕವಿ ಮಾನಸದಲ್ಲಿ ಭಾವಸೌಂದರ್ಯಯುತವಾದ ರಸಸೃಷ್ಟಿಯನ್ನು ಸೃಜಿಸಿದನು. ಜ್ಞಾನ-ಪರಿಜ್ಞಾನವೇ ಇಲ್ಲದವರಲ್ಲಿ ರಸ ಸಿದ್ಧಿಯನ್ನು ಸೃಷ್ಟಿಸಿದಲ್ಲಿ, ಸಹೃದಯರಿಂದ ಸಮ್ಯಕ್ ರೂಪದಲ್ಲಿ ಭೋಗಿಸಲ್ಪಡುವ ಕಾವ್ಯಭಾವರಸವನ್ನು ಉಂಟುಮಾಡುವುದರಲ್ಲಿ ಸಾಫಲ್ಯವುಂಟೆ ? "

ಸಂ. ವಾಕ್ಯ : 'सहृदयपरिभुक्तं नान्यकाव्यं रसाय ।'

ಶ್ಲೋಕ 5 : [ ರಮಣೀಯತೆಯನ್ನು ... ಒಕ್ಕಣಿಸಿದ್ದಾರೆ ]

"ಶೋಕದಿಂದ ಶ್ಲೋಕ ಮೂಡಿತು, ಆದಿಕವಿ ವಾಲ್ಮೀಕಿಯ ಮುಖಾರವಿಂದದಲ್ಲಿ ವ್ಯಾಧನಿಂದ ಹೊಡೆಯಲ್ಪಟ್ಟ ಕ್ರೌಂಚಪಕ್ಷಿಯನ್ನು ಕಂಡು, ಅದರ ಪ್ರಿಯತಮೆ ಕ್ರೌಂಚಿನಿಯ ಮನೋವ್ಯಥೆಯನ್ನು ದೃಷ್ಟಿಸಿ ವಾಲ್ಮೀಕಿ ಹೃದಯವು ಕರಗಿತಷ್ಟೆ! ಶ್ರೀರಾಮನ ಕಣ್ಣೀರನ್ನು ಕಂಡು ಸುಗ್ರೀವನ ಹೃದಯವು ದ್ರವಿತವಾಗಿತ್ತು! ಈ ಕವಿಪುಂಗವನ ವಾಣೀ ಪ್ರಸಾದನವು ಅಸಂಖ್ಯ ಕವಿಗಳ ಕಾವ್ಯ ಸೃಷ್ಟಿಗೆ ಕಾರಣವಾಯಿತು. ಇದರ ಹಿಂದಿರುವ ರಮ್ಯತೆಯನ್ನು ಅರಿಯುವುದಷ್ಟು ಸುಲಭವೆ?"

ಸಂ. ವಾಕ್ಯ : 'कविसहृदयचेतः .... मूलमस्य ।'

ಶ್ಲೋಕ 6 : [ರಮಣೀಯತೆಯನ್ನು .. ಒಕ್ಕಣಿಸಿದ್ದಾರೆ]

"ಈ ದೃಶ್ಯಮಾನ ಬ್ರಹ್ಮಾಂಡದ ಕವಿ ಶಿಲ್ಪಿಗಳಿಗೆ ಮೊದಲನೆಯದಾದ ಕಾವ್ಯಸಂಪತ್ ಲಕ್ಷ್ಮಿಯು, ಸಾಹಿತ್ಯದ ಮರಳುಗಾಡಿನಲ್ಲಿ ದಿಕ್ಕುತೋಚದೆ ಅಲೆದಾಡುತ್ತಿದ್ದ ಕವಿಗಳಿಗೆ, ಮಾರ್ಗದರ್ಶನಕ್ಕಾಗಿ ವಾಲ್ಮೀಕಿ ರಾಮಾಯಣವು ಸೃಷ್ಟಿಯಾಯಿತು. ಇದನ್ನು ಆಧರಿಸಿ ಅಸಂಖ್ಯ ಕಾವ್ಯಕುಸುಮಗಳು ಈ ಜಗತ್ತಿನಲ್ಲಿ ವಿಕಸಿತವಾಗಿ ಕಂಗೊಳಿಸಿದವು. ಈ ಕಾವ್ಯಗಳೆಲ್ಲವೂ ರಮ್ಯತೆಯನ್ನು ಹುಡುಕಲು ಸಹಾಯಕಗಳಾದವು. ಇಂಥ ಧನ್ಯತೆ ಮತ್ತೆಲ್ಲಿದೆ!"

ಸಂ. ವಾಕ್ಯ : 'सहृदयहृदयं .... मदन्यः ।'

## 2. ताजमहल् —

ಶ್ಲೋಕ 1 : ವಿಶ್ವದ ಅತ್ಯದ್ಭುತ ವಸ್ತುವೆಂದು ಪರಿಗಣಿತವಾದ 'ತಾಜಮಹಲ್' ಅನ್ನು, ಶ್ರೀ ಪಾಂಡುರಂಗಿಯವರು, ಸುಮಧುರ ಶೈಲಿಯಲ್ಲಿ ಸರಳ ಶಬ್ದಸಂಪತ್ತಿನಲ್ಲಿ ಬಣ್ಣಿಸಿದ್ದಾರೆ :

"ರಾಜಶ್ರೇಷ್ಠ ಶಹಜಹಾನನೆ, ನಿನ್ನಿಂದ ಈ ಭಾರತ ಸಾಮ್ರಾಜ್ಯವು ಸುವ್ಯವಸ್ಥಿತವಾಗಿ ಆಳಲ್ಪಟ್ಟಿತು. ನೀನು ನಿನ್ನ ಪ್ರಿಯತಮೆ ಮುಮ ತಾಜಮಹಲಳ ಮೇಲಿರುವ ಪರಿಶುದ್ಧ ಪ್ರೇಮವನ್ನು ಶಾಶ್ವತವನ್ನಾಗಿಸಲು (ನಿನ್ನ ಪ್ರೇಮದ ಕಣ್ಣೀರು) ಇಷ್ಟಪಟ್ಟಂತೆ ತೋರುತ್ತದೆ. ನಿನ್ನಂತೆ

ಎಲ್ಲರೂ, ತಮ್ಮ ವ್ಯಥೆಯ ವೇಳೆಯಲ್ಲಿ ನಿನ್ನ ನಿರ್ಮಾಣದ ತಾಜಮಹಲಿ ಸೋಪಾದಿಯಲ್ಲಿ ಶಾಶ್ವತ ನೆನಪಿನ ಭವ್ಯ ಭವನವನ್ನು ನಿರ್ಮಿಸಲಾರರು. ಆದರೆ ನೀನು, ನಿನ್ನ ವ್ಯಥಾರೂಪವಾದ ಕಣ್ಣೀರನ್ನು ಈ ತಾಜಮಹಲ್ ನ ರೂಪದಲ್ಲಿ ಅನಶ್ವರವಾಗಿಸಿಬಿಟ್ಟಿರುವೆ ನಿನ್ನ ಈ ಮಹತ್ಕಾರ್ಯವು ವಿಶ್ವದ ಅದ್ಭುತವೇ ಸರಿ.".

ಸಂ. ವಾಕ್ಯ : 'बाष्पं प्रेम .... मत्युल्बणम् ।'

ಶ್ಲೋಕ 2 : [ ವಿಶ್ವದ ... ಬಣ್ಣಿಸಿದ್ದಾರೆ : ]

" ಎಲೈ ಶಹಜಹಾನನೆ, ಸೌಂದರ್ಯಾರಾಧಕನಾದ ನಿನ್ನಿಂದ, ಈಗ, ನಿನ್ನ ಪ್ರಿಯತಮೆ ಮುಮತಾಜಳ ಪ್ರೇಮವನ್ನು ಶಾಶ್ವತ ಗೊಳಿಸಲು 'ತಾಜಮಹಲು' ನಿರ್ಮಿಸಲ್ಪಟ್ಟಿದೆ. ಮನೋಹರವಾದ ಮರಣವನ್ನು ಉಂಟುಮಾಡಿದ ಮನ್ಮಥನು ( ನಿನಗೆ ವಿರಹವನ್ನುಂಟುಮಾಡಿದವನಾದ ) 'ಅನಂಗ 'ನೆನಿಸಿದ್ದೂ ( ಶರೀರರಹಿತನಾಗಿ) 'ಸಾಂಗ' ನಾಗಿದ್ದಾನೆ. ( ಸಶರೀರಿಯಾಗಿ ಉಳಿದಂತಾಗಿದ್ದಾನೆ), ಈ ನಿನ್ನ ನಿರ್ಮಿತಿಯು, ಶಾಂತಮಯ ಬೆಳದಿಂಗಳ ರಾತ್ರಿಯಲ್ಲಿ, ಪ್ರೇಮಪುರಸ್ಸರವಾಗಿ ಕಿವಿಯಲ್ಲಿ ಹೇಳಲಾದ 'ರಹಸ್ಯಸುಭಾಷಣೆ' ಯನ್ನು, ಕಲ್ಪಕಲ್ಪಾಂತರದವರೆಗೆ ಈ ತಾಜಮಹಲು, ಆಕಾಶದ ನಕ್ಷತ್ರ ಸಮೂಹದೊಂದಿಗೆ ತಲೆಯೆತ್ತಿ ನಡೆಸುತ್ತಿರುವಂತೆ ಕಾಣುತ್ತಿದೆ."

ಸಂ. ವಾಕ್ಯ : 1). 'मृत्युरपि चानङ्गो नु साङ्गः कृतः ।'
2) 'शान्तायां .... कल्पान्तपर्यन्तकम् ।'

ಶ್ಲೋಕ 3 : [ ವಿಶ್ವದ ... ಬಣ್ಣಿಸಿದ್ದಾರೆ : ]

" ಎಲೈ ಶಹಜಹಾನನೆ, ನಿನ್ನ ರಾಣಿ ಮುಮತಾಜಳ ಪ್ರೇಮವನ್ನು ಕಲ್ಪಕಲ್ಪಾಂತರದ ವರೆಗೆ ಶಾಶ್ವತಗೊಳಿಸಲು ನಿರ್ಮಿಸಿದ ಈ 'ತಾಜಮಹಲ್' ಕಟ್ಟಡಕ್ಕೆ ನೀನು ಅಪಾರ ಧನರಾಶಿಯನ್ನು ವ್ಯಯಮಾಡಿರುವೆ ಈ ಕಟ್ಟಡವು ನಿರ್ಮಾಣವಾಗಿ ಅನಂತ ಕಾಲ ಕಳೆದುಹೋಗಿದ್ದರೂ ಅದು

ಇಂದೂ ಸಹ ನಕ್ಷತ್ರಗಳೊಡನೆ ಸಂಭಾಷಿಸುತ್ತಿದೆ. ನೀನು ಅತಿಶಯವಾಗಿ ಪ್ರೀತಿಸುತ್ತಿರುವ ಈ ಕಟ್ಟಡವು ಸೌಂದರ್ಯದ ಘನೀಭೂತ ನಿಧಿಯಂತೆ ನಿಂತಿದೆ."

ಸಂ. ವಾಕ್ಯ : 1) 'संलीनं तिमिरे .... भाषते ।'
2) 'स्मर्तर्हि ...' निर्गच्छति ।'

3. ಪ್ರಶ್ನೋತ್ತರ :

ಕ) ರಮ್ಯತೆಯನ್ನು ನಿಮ್ಮ ಮಾತಿನಲ್ಲಿ ವರ್ಣಿಸಿ.
ಖ) ತಾಜಮಹಲಿನ ಸೌಂದರ್ಯವನ್ನು ಒಕ್ಕಣಿಸಿ
ಉತ್ತರ : ಭಾವವಿವರಣೆಯನ್ನು ಬರೆಯಿರಿ.

4. ವ್ಯಾಕರಣಾಂಶಗಳು :

1) ಕ್ರಿಯಾರೂಪ : विघटयतु- ವಿ+ಘಟ್ ಧಾತು, ಣಿಜಂತ ಲೋಟ್ ಲಕಾರ, ಪ್ರಥಮ ಪುರುಷ, ಏಕವಚನ

2) ಸಮಾಸಗಳು :

1) पुलिनजननमुख्याः- पुलिने जननं यस्य सः (ಬಹುವ್ರೀಹಿ)

2) धूसरपथम् - धूसरस्य पन्थाः धूसरपथः, तम् (ಷಷ್ಠೀ ತತ್ಪುರುಷ)

5. ಕಠಿಣ ಪದಗಳ ಅರ್ಥ :

भृङ्गवृन्दम् – ತುಂಬಿ ಸಮೂಹ शक्रचाप – ಇಂದ್ರ ಧನುಸ್ಸು पुलिनजननमुख्यः–ವಾಲ್ಮೀಕಿ मनीषा–ಬಯಕೆ अनङ्ग–ಕಾಮದೇವ स्मारं स्मारं–ಮತ್ತೆ ಮತ್ತೆ ನೆನೆಯುತ್ತ

## ಪಾಠ : 16 वेमनायोग्य सूक्तयः

## [ ವೇಮನ ಸೂಕ್ತಿಗಳು ]

1. ಅವತರಣಿಕೆ :

ಸಂತರು, ಯೋಗಿಗಳು, ಮಹನೀಯರು ತಮ್ಮ ಅನುಭವವಾಣಿಗಳನ್ನು 'ಆಣಿಮುತ್ತು' ಗಳ ರೂಪದಲ್ಲಿ ಜಗತ್ತಿನ ಜನರ ಆತ್ಮಕಲ್ಯಾಣಕ್ಕಾಗಿ ನಡೆನುಡಿಗಳನ್ನು ತಿದ್ದುವುದಕ್ಕಾಗಿ ನುಡಿದಿದ್ದಾರೆ. ವೇಮನ ತೆಲುಗಿನ ಮಹಾಯೋಗಿ-ಮಹಾಕವಿ. ಇಲ್ಲಿ ಇವನ ಕೆಲವು ಸೂಕ್ತಿಗಳನ್ನು ಸಂಗ್ರಹಿಸಲಾಗಿದೆ.

2. ವೇಮನ ಕವಿ : ( ಸೂಚನೆ : ಪಠ್ಯಪುಸ್ತಕದಲ್ಲಿ ನೋಡಿರಿ)

3. ಶ್ಲೋಕ-ಭಾವವಿವರಣೆ :

ಶ್ಲೋಕ 1 : "ಲೋಕದಲ್ಲಿ ಜನರು, ಡೊಂಕಾಗಿರುವ-ವಕ್ರವಾಗಿರುವ ಶಿಲಾಖಂಡ (ಕಲ್ಲುತುಂಡು) ವನ್ನು ವಿಗ್ರಹವನ್ನಾಗಿ ಮಾಡಿಟ್ಟು ಆರಾಧಿಸುತ್ತಾರೆ. ಆದರೆ 'ಸೂಕ್ಷ್ಮಬುದ್ಧಿಯ' ಯುಕ್ತಾಯುಕ್ತ ಪರಿಜ್ಞಾನವುಳ್ಳ ಸಜ್ಜನರು, 'ಸೃಷ್ಟಿಯ ಅಣುಪರಮಾಣು-ಪ್ರಾಣಿಪಶುಪಕ್ಷಿ-ಕ್ರಿಮಿಕೀಟಗಳಲ್ಲೂ ದೇವರಿದ್ದಾನೆ ; ಅವನ ಅಂಶವಿದೆ ಎಂದೂ ; ಅವನಿಗೆ ಸಮಾನರು ಯಾರೂ ಇಲ್ಲವೆಂದೂ' ಭಾವಿಸುತ್ತಾರೆ" ವೇಮನಯೋಗಿಯದೂ ಇದೇ ಅಭಿಪ್ರಾಯವಾಗಿದೆ.

ಸಂ. ವಾಕ್ಯ : 'शिव इति परिपूर्णो नेति जानन्ति वेम ।'

ಶ್ಲೋಕ 2 : "ಲೋಕದ ವ್ಯವಹಾರವು ವಿಚಿತ್ರವಾಗಿದೆ. ಕಪಟಿಗಳೂ ಧೂರ್ತರಾದವರೂ ಕೋತಿಯನ್ನು ಹಿಡಿದು, ಅದರ ನಾನಾ ಚೇಷ್ಟೆಗಳನ್ನು ಜಗತ್ತಿಗೆ ತೋರಿಸಿ ಹಣ ಸಂಪಾದಿಸುತ್ತಾರೆ. ನೀತಿ ನಿಯಮ ಬಾಹಿರರು ಅಲ್ಪವಸ್ತುವಿನಲ್ಲೇ ಸುಖವನ್ನು ಹೊಂದುತ್ತಾರೆ. ಇದು ಲೋಕದ ವಿಚಿತ್ರವಲ್ಲದೆ ಮತ್ತೇನು ? ಆದರೆ ಸಜ್ಜನರು ಇಂಥ ಪ್ರವೃ-

ತ್ರಿಗಳಲ್ಲಿ ತೊಡಗುವುದಿಲ್ಲ" ಎಂದು ವೇಮನ ಯೋಗಿ ಹೇಳಿದ್ದಾನೆ.

ಸಂ. ವಾಕ್ಯ : 'क्षुद्रेषु सन्ति हि तथात्मसुखाय वेम ।'

ಶ್ಲೋಕ 3 : "ಎಲೈ ಮೃಗರಾಜನೆ, ಕೇಸರಿಯೆ ! ನಿನ್ನ ಮುಖದ ಮೇಲೆ ದಟ್ಟವಾದ ರೋಮರಾಜಿಯಿದೆ ! ಇದರಿಂದ ಯಾವ ಪ್ರಯೋಜನವುಂಟು ? ದಾನ-ಧರ್ಮವಿಲ್ಲದೆ ಲೋಕದಲ್ಲಿ 'ದಾತೃ'ವೆನಿಸಿಕೊಳ್ಳಲು ಸಾಧ್ಯವಿಲ್ಲ. ಗಜರಾಜನು ತನ್ನ ಶ್ವಾಸೋಚ್ಛ್ವಾಸ ಸೌರಭದಿಂದ ಪ್ರಸಿದ್ಧವಾಗಿದೆ ಈ ಗೌರವವು ಕತ್ತೆ-ಕುದುರೆಗೆ ಲಭ್ಯವಾಗಲು ಸಾಧ್ಯವೆ ? " — ಎಂದು ವೇಮನ ಯೋಗಿಯು ಹೇಳಿದ್ದಾನೆ.

ಸಂ. ವಾಕ್ಯ : 'दाता भवेन्नहि विना भुवि दानधर्मं ।'

ಶ್ಲೋಕ 4 : "ನಾಯಿಯು, ಗುರುಸಾನ್ನಿಧ್ಯದಲ್ಲಿದ್ದ ಮಾತ್ರಕ್ಕೆ ಅದು ಕಚ್ಚುವ ಸ್ವಭಾವವನ್ನು ಬಿಡುವುದಿಲ್ಲ— ಋಷಿಯ ಆಶ್ರಮದಲ್ಲಿನ ಬೆಕ್ಕು ಇಲಿ ಹಿಡಿಯದೇ ಇರುವುದಿಲ್ಲ. ಅದರ ಮೇಲೆ ಗುರು-ಆಶ್ರಮದ ಸದ್ಭಾವ ಪ್ರಭಾವ ಬಿದ್ದಿರುವುದಿಲ್ಲ. ಅದು ಗೌರವ ಸ್ಥಾನವನ್ನು ಪಡೆಯಲಾರದು. ನಾಯನ್ನು ತಿನ್ನುವ ಅಂತ್ಯಜನು ಭಕ್ತಿಪರವಶತೆಯಿಂದ ಶ್ರೇಷ್ಠತೆಯನ್ನು ಹೊಂದಿ ತನ್ನ ಬಾಳಿನ ದುರಿತವನ್ನು ಹೋಗಲಾಡಿಸಿಕೊಳ್ಳುತ್ತಾನೆ. ಭಕ್ತಿಯು ಬಹುಹಿರಿದಾದುದೆಂದು" ವೇಮನ ಯೋಗಿಯು ಹೇಳಿರುವನು.

ಸಂ. ವಾಕ್ಯ : 'हरति दुरितराशिं भक्तिरेकैव वेम ।'

ಶ್ಲೋಕ 5 : "ಇಂದಿನ ಕಾಲದ ಗುರುಗಳು, ಇಂದಿನ ಕಾಲದ ಶಿಷ್ಯರಿಗೆ ಅವರಿಷ್ಟಪಡುವ ವಿದ್ಯೆಗಳನ್ನು ಬೋಧಿಸುತ್ತಾರೆ. ಆದರೆ ಈ ಈರ್ವರೂ ತಮ್ಮ ತಮ್ಮ ಗೌರವಸ್ಥಾನಕ್ಕೆ (ಗುರು-ಶಿಷ್ಯ ಎಂಬ) ಅನರ್ಹರೆನಿಸುತ್ತಾರೆ. ಇವರಿಗೆ ಆತ್ಮಜ್ಞಾನದ ಅರಿವು ಇರುವುದಿಲ್ಲ. ಇವರಲ್ಲಿ 'ನಾವು ತುಂಬ ತಿಳಿದವರು' ಎಂಬ ದುರಭಿಮಾನ ಮಾತ್ರವಿರುತ್ತದೆ." ಎಂದು ವೇಮನ ಯೋಗಿಯು ನುಡಿದಿದ್ದಾನೆ.

ಸಂ. ವಾಕ್ಯ : 'नहि नहि निजमानं वेत्ति कुत्रापि वेम ।'

ಶ್ಲೋಕ 6 : "ಪರ್ವತ, ಭೂಮಿ, ಅಂಗಣ ಮೊದಲಾದ ಪ್ರದೇಶದಲ್ಲಿ ಇರುವ ಮರದ ಕೊಂಬೆ-ಎಲೆ-ಹೂ-ಬೀಜಗಳಲ್ಲಿ ಮಾಧುರ್ಯವು ಇರುವುದಿಲ್ಲ. ಅಂತ್ಯದಲ್ಲಿ ಈ ಸ್ಥಳದಲ್ಲಿ ಹಣ್ಣು ತೋರುತ್ತದೆ. ಅದು ಆಸ್ವಾದಿಸಲು ಮಧುರವಾಗಿರುತ್ತದೆ. ಆ ಮಾಧುರ್ಯವು ಹಣ್ಣಿನದೇ ಹೊರತು ವೃಕ್ಷದ್ದಾಗಲೀ ಕೊಂಬೆ-ಹೂ-ಎಲೆಗೆ ಸಂಬಂಧಿಸಿದುದಲ್ಲ"- ಎಂದು ಯೋಗಿ ವೇಮನ ಅಭಿಪ್ರಾಯಪಟ್ಟಿದ್ದಾನೆ.

ಸಂ. ವಾಕ್ಯ : 'जनयति सद्गुरत्वं तत् फले योगि वेम ।'

ಶ್ಲೋಕ 7 : "ಬೆಟ್ಟದ ಮೇಲಿಂದ ಕೆಳಕ್ಕೆ ಕೊಳೆಯಿಂದ ಕೂಡಿದ್ದು, ಶಬ್ದ ಮಾಡುತ್ತ ಹರಿದುಬರುವ ಝರಿ (ನದಿ) ಯು, ಹರನ ಜಟೆಯಿಂದ ಹೊರಟು ಹರಿದು ಬರುವ ಗಂಗೆಯಂತೆಯೇ ಹರಿಯುತ್ತದೆ, ನಿಜ. ಆದರೆ ಈ ಝರಿಯಲ್ಲಿ ಗಂಗೆಯ ಪಾವನತ್ವ-ಪವಿತ್ರತೆಯು ಇರುವುದಿಲ್ಲ. ಸುಗುಣ-ದುರ್ಗುಣವಿರುವವರಿಗೆ ಹೆಸರಲ್ಲಿ ಭೇದವಿರದಿದ್ದರೂ ಗುಣದಲ್ಲಿ ಭೇದವಿರುವುದು ಸಹಜವೇ ಹೌದು." ಎಂದು ವೇಮನ ಯೋಗಿಯು ಹೇಳಿದ್ದಾನೆ

ಸಂ. ವಾಕ್ಯ : 'सुगुणकुगुणयोः किं नामतोऽस्तीह वेम ।'

ಶ್ಲೋಕ 8 : "ಯೋಗ್ಯವಲ್ಲದಿರುವ ಕಾಡಿನ ಭೂಮಿಗೆ ಬೇಲಿ ಹಾಕಿ, ಉತ್ತು ಅದರಲ್ಲಿ ಬೀಜ ಪ್ರದಾನ ಮಾಡಿ, ಗೊಬ್ಬರ ಹಾಕಿ, ಕಳೆ ಕಿತ್ತು ಫಲ ಹೊಂದಿ, ತೆರಿಗೆ ಕೊಟ್ಟು ಸುಖವನ್ನು ಅನುಭವಿಸಲಾಗುತ್ತದೆ. ಇದನ್ನು ನೋಡಿದರೆ ಪುರುಷಾರ್ಥಿಗೆ ಎಲ್ಲವೂ ಸಾಧ್ಯವಾಗುತ್ತದೆಂದು ತಿಳಿಯುತ್ತಲ್ಲವೆ ?" ಎಂದು ವೇಮನ ಯೋಗಿ ಹೇಳಿದ್ದಾನೆ.

ಸಂ. ವಾಕ್ಯ : 'भूत्वा सुखी न वितरेदशनं तु वेम ।'

4. ಪ್ರಶ್ನೋತ್ತರ :

ವೇಮನ ಕವಿಯ ಛಾಪೋಕ್ತಿಗಳನ್ನು ವರ್ಣಿಸಿರಿ.

ಉತ್ತರ : (ಶ್ಲೋಕ ಭಾವವಿವರಣೆಯನ್ನು ಬರೆಯಿರಿ.)

5. ಕಠಿಣ ಪದಗಳ ಅರ್ಥ : ಕೀಶ–ಕಪಿ ದೃಷದ್–ಶಿಲೆಯನ್ನು

## ಪಾಠ : 17 श्रीस्तवदशकम्

### [ ಲಕ್ಷ್ಮೀದೇವಿಯ ಹತ್ತು ಸ್ತುತಿಗಳು ]

1. ಅವತರಣಿಕೆ :

**' सर्वे गुणाः काञ्चनमाश्रयन्ते '—**

ಎಲ್ಲವೂ ಹಣ–ಧನವನ್ನು ಅವಲಂಬಿಸಿವೆ. ಇಲ್ಲಿ ಹಣ–ಧನದ ಅಧಿದೇವತೆಯಾದ ಮಹಾಲಕ್ಷ್ಮಿಯನ್ನು ಸ್ತೋತ್ರಮಾಡಲಾಗಿದೆ.

2. ಶ್ಲೋಕ-ವಿವರಣೆ :

ಶ್ಲೋಕ 1 : "ಗರುಡವಾಹನನಾದ ಮಹಾವಿಷ್ಣುವಿನ ವಕ್ಷಸ್ಥಳದಲ್ಲಿ ನಿವಾಸಿನಿಯಾದ, ಎಲ್ಲರಿಗೂ ಸೌಮ್ಯದೃಷ್ಟಿಯಿಂದ ಅತಿಶಯ ಕ್ಷೇಮವನ್ನುಂಟುಮಾಡುವ ಮಹಾಲಕ್ಷ್ಮಿಯನ್ನು ಸ್ಮರಿಸುತ್ತೇನೆ"– ಎಂದು ಜಗ್ಗು ಶಿಂಗರಾರ್ಯನು ಹೇಳಿದ್ದಾನೆ.

ಶ್ಲೋಕ 2 : "ಪುರಾಣ ಪುರುಷೋತ್ತಮನಾದ, ಶ್ರೇಷ್ಠಗುಣ-ಗಣಪರಿಪೂರ್ಣನಾದ ಮಹಾವಿಷ್ಣುವಿನ ಅವತಾರಕ್ಕೆ ಅನುಗುಣವಾದ ಲಕ್ಷಣಗಳಿಂದ ಕೂಡಿ ಅವಿನಾಭಾವ ಸಂಬಂಧವನ್ನು ಹೊಂದಿದ, ದಯೆಯಿಂದ ಮೂರು ಲೋಕಗಳನ್ನು (ಸ್ವರ್ಗ–ಮರ್ತ್ಯ–ಪಾತಾಳ) ಸಂರಕ್ಷಿಸುವ, ಮಹಿಮಾತಿಶಯವುಳ್ಳ, ಎಲ್ಲರನ್ನೂ ಸಂತೃಪ್ತಗೊಳಿಸುವ ಮಹಾಲಕ್ಷ್ಮಿಯನ್ನು ನಮಸ್ಕರಿಸುತ್ತೇನೆ" ಎಂಬುದಾಗಿ ಜಗ್ಗು ಶಿಂಗರಾರ್ಯನು ಹೇಳಿದ್ದಾನೆ.

ಶ್ಲೋಕ 3 : "ಆಶ್ರಿತಜನರ ಕಷ್ಟಸಂಕಷ್ಟಗಳನ್ನು ಪರಿಹರಿಸುವು

ದರಲ್ಲಿ ಪವಿತ್ರಳಾದ, ಅತಿಶಯವಾದ ಭಾಗ್ಯಸಂಪತ್ತಿಗೆ ಅಧಿದೇವತೆಯಾದ, ಮಹಾವಿಷ್ಣುವಿಗೆ ಮಹತ್ತಮ ಪ್ರೀತಿಪಾತ್ರಳಾದ, ದಯಾರ್ದ್ರಹೃದಯೆಯಾದ, ಕ್ಷೀರಸಮುದ್ರದಲ್ಲಿ ಹುಟ್ಟಿದವಳಾದ ಮಹಾಲಕ್ಷ್ಮಿಯನ್ನು ಸೇವಿಸುತ್ತೇನೆಂದು" ಜಗ್ಗು ಶಿಂಗರಾರ್ಯನು ಅಂದಿದ್ದಾನೆ

ಶ್ಲೋಕ 4 : "ಕರದ್ವಯುಗಳಲ್ಲಿ ಕಮಲಗಳನ್ನು ಧರಿಸಿರುವ, ಮಂಗಳವನ್ನುಂಟುಮಾಡುವ ಕಮಲವೇ ಗೃಹವಾಗುಳ್ಳ, ರತ್ನಖಚಿತ ಭೂಷಣಗಳಿಂದ ಮಂಡಿತಳಾದ, ತನ್ನ ಉತ್ಪತ್ತಿಸ್ಥಾನವಾದ ಕ್ಷೀರಸಮುದ್ರದ ಅಲೆಗಳಿಂದ ಸಂತೋಷದ ಅಲೆಗಳನ್ನೆಬ್ಬಿಸಿ ಸುಜನರಿಗೆ ಆಹ್ಲಾದವನ್ನುಂಟುಮಾಡುವ, ಶುಭ್ರವೂ-ಮೃದುವೂ ಆದ ವಸ್ತ್ರಾಲಂಕಾರಗಳಿಂದಾವೃತವಾದ ದೇಹವುಳ್ಳ ಮಹಾಲಕ್ಷ್ಮಿಯನ್ನು ಸೇವಿಸುತ್ತೇನೆಂದು" ಜಗ್ಗು ಶಿಂಗರಾರ್ಯನು ಹೇಳಿದ್ದಾನೆ.

ಶ್ಲೋಕ 5 : "ಶೀಘ್ರಕೋಪಿ ದುರ್ವಾಸನಿಂದ ಶಪ್ತನಾಗಿ ಸಕಲ ಸಾಮ್ರಾಜ್ಯಸಂಪತ್ತನ್ನು ಕಳೆದುಕೊಂಡಿದ್ದಾಗ್ಯೂ, ನಿನ್ನ ನೇತ್ರಾಪಾಂಗ ದೃಷ್ಟಿಸಮೂಹವೆಂಬ ಅಮೃತ ಸೇಚನದಿಂದ (ನಿನ್ನ ಕಡೆಗಣ್ಣಿನ ಅನುಕಂಪ ದೃಷ್ಟಿಯಿಂದ) ಪುನಃ ಸಕಲ ಸೌಖ್ಯ ಸನ್ಮಾನ ಸಾಮ್ರಾಜ್ಯಸಂಪತ್ತನ್ನು ಪಡೆದವನಾಗಿ ವಿಜೃಂಭಿಸಿದ ಇಂದ್ರನು ನಿನ್ನ ಅನುಗ್ರಹ ಪಡೆದು ಸುಖಿಸಿದನು. ಇಂಥ ನಿನ್ನನ್ನು ಆರಾಧಿಸುತ್ತೇನೆ" ಎಂದು ಜಗ್ಗು ಶಿಂಗರಾರ್ಯನು ಹೇಳಿದ್ದಾನೆ.

ಶ್ಲೋಕ 6 : "ಕೆಂದಾವರೆಯು ಕೆಂಪಿನಿಂದ ಕೆಂಪಾದ ಕೈಕಾಲು ಮುಖವುಳ್ಳ, ಕಮಲದಂತೆ ವಿಶಾಲ ವಿಕಸಿತ ಕಣ್ಣುಗಳುಳ್ಳ, ಕಮಲಗೃಹವಾಸಿನಿಯಾದ, ಕರದ್ವಯಗಳಲ್ಲಿ ಕಮಲಧಾರಿಣಿಯಾದ, ಮಹಾತಾಯಿ ಮಹಾಲಕ್ಷ್ಮಿಯೇ, ನಿನ್ನನ್ನು ನಮಸ್ಕರಿಸುವವರ ವಿಷಯದಲ್ಲಿ ನೀನು ಸುಪ್ರಸನ್ನಳಾಗಿ ಅನುಗ್ರಹಪುಷ್ಪವನ್ನು ಅವರಿಗೆ ಪ್ರದಾನಮಾಡುತ್ತೀಯೆ. ಅಂಥ ನಿನ್ನನ್ನು ಪೂಜಿಸುತ್ತೇನೆ" ಎಂದು ಜಗ್ಗು ಶಿಂಗರಾರ್ಯನು ಹೇಳಿದ್ದಾನೆ

ಶ್ಲೋಕ 7 : "ಮಹಾಲಕ್ಷ್ಮಿಯೆ, ನೀನು ದಯಾರ್ದ್ರಹೃದಯುಳ್ಳ

ಸುಪ್ರಸನ್ನ ಮಾನಸಿಯು ; ಮಹಾವಿಷ್ಣುವಿಗೆ ಪ್ರೀತಿಪಾತ್ರಳು ; ಆತನಿಗೆ ಪ್ರಣಯರಸಪಾನ ಮಾಡಿಸುವವಳು. ನಿನ್ನ ಪಾದಾರವಿಂದಗಳನ್ನು ಸಂಪೂಜಿಸುವವರಿಗೆ ಅನುಗ್ರಹದಾಯಕಳು. ಋಷಿಮುನಿಗಳು ಮೋಕ್ಷ ಲಕ್ಷ್ಮಿಯನ್ನು ಪಡೆಯಲು ನಿನ್ನನ್ನು ಆಶ್ರಯಿಸಿರುವರು. ಇಂಥ ನೀನು ನನ್ನನ್ನು ಅನುಗ್ರಹಿಸುವವಳಾಗು" ಎಂದು ಜಗ್ಗು ಶಿಂಗರಾರ್ಯನು ಕೇಳಿಕೊಂಡಿದ್ದಾನೆ.

ಶ್ಲೋಕ 8 : "ತಾಯಿಯೆ, ನೀನು ಕೆಲವು ಸಮಯ ತೀಕ್ಷ್ಣದೃಷ್ಟಿಯಿಂದಲೂ, ಕೆಲವು ಸಮಯ ಮಂದದೃಷ್ಟಿಯಿಂದಲೂ, ಮತ್ತೆ ಕೆಲವು ಸಮಯ ಸಂಪೂರ್ಣಾನುಗ್ರಹ ದೃಷ್ಟಿಯಿಂದಲೂ ಸಂರಕ್ಷಿಸುವ-ಪೀಡಿಸುವ ಸಾಮರ್ಥ್ಯವುಳ್ಳವಳಾಗಿದ್ದೀಯೆ. ದುಷ್ಟನಿಗ್ರಹ - ಶಿಷ್ಟಸಂರಕ್ಷಕನಾಗಿರುವ ಮಹಾವಿಷ್ಣುವಿನ ವಕ್ಷಸ್ಥಳವನ್ನು ಆಶ್ರಯಿಸಿದ್ದೀಯೆ. ಲೋಕಗಳನ್ನು ಕೃಪಾದೃಷ್ಟಿಯಿಂದ ಕಾಪಾಡುವವಳು ನೀನಾಗಿರುವೆ. ನಿನ್ನ ಅನುಗ್ರಹವನ್ನು ನಿರೀಕ್ಷಿಸುತ್ತೇನೆ" ಎಂದು ಜಗ್ಗು ಶಿಂಗರಾರ್ಯನು ಹೇಳಿದ್ದಾನೆ.

ಶ್ಲೋಕ 9 : "ನೀನು ಪದ್ಮೋದ್ಭವಳು; ನೀನು ಅನುಗ್ರಹದಾಯಕಳು ಎಂದು ಜನರಿಂದ ಹೊಗಳಿಸಿಕೊಳ್ಳುತ್ತಿರುವೆ. ನಿನ್ನ ಕಣ್ಣೆಂಬ ತಾವರೆಗಳಿಂದ ಕೂಡಿ ನೀನು ದೀನದಲಿತರನ್ನು ಸಂಪದ್ಯುಕ್ತರನ್ನಾಗಿ ಮಾಡು" ಎಂದು ಜಗ್ಗು ಶಿಂಗರಾರ್ಯನು ಹೇಳಿದ್ದಾನೆ; ಲಕ್ಷ್ಮೀದೇವಿಯನ್ನು ಪ್ರಾರ್ಥಿಸಿದ್ದಾನೆ.

ಶ್ಲೋಕ 10 : "ಎಲೌ ಮಹಾಲಕ್ಷ್ಮಿಯೆ, ಜಗತ್ತಿನ ರಕ್ಷಣಾಭಾರವನ್ನು ನಿರ್ವಹಿಸುತ್ತಿರುವವಳೆ, ನೀನು ಸುಧಾರಸಕ್ಕೆ ಸಮಾನವಾಗಿರತಕ್ಕ ಕಟಾಕ್ಷವನ್ನು ನನ್ನಲ್ಲಿಡು. ನಿನ್ನ ಕಟಾಕ್ಷ ಸೇಚನದ ಪ್ರಭಾವದಿಂದ ವೃದ್ಧಿ ಹೊಂದಿದ, ಮನುಷ್ಯ, ಮೇಘ, ವೃಷಭ,ಹಂಸ ವಾಹನಗಳಾಗುಳ್ಳ ಕುಬೇರ–ಇಂದ್ರ–ಶಿವ–ಬ್ರಹ್ಮರೇ ಮೊದಲಾದವರ ರೀತಿಯಲ್ಲಿ ನೀನು ನನ್ನನ್ನು ಎಡೆಬಿಡದೆ ಅನುಗ್ರಹಿಸುವವಳಾಗು" ಎಂದು ಜಗ್ಗು ಶಿಂಗರಾರ್ಯನು ಪ್ರಾರ್ಥಿಸಿದ್ದಾನೆ.

3. ಪ್ರಶ್ನೋತ್ತರ :

ಜಗನ್ನಾಥಿಂಗರಾರ್ಯನು ಲಕ್ಷ್ಮೀದೇವಿಯನ್ನು ಎಂತು ಸ್ತೋತ್ರ ಮಾಡಿದ್ದಾನೆ ?

ಉತ್ತರ : ಭಾವವಿವರಣೆಯನ್ನು ಬರೆಯಿರಿ.

4. ವ್ಯಾಕರಣಾಂಶಗಳು :

1) ಕ್ರಿಯಾರೂಪಗಳು : 1) अवसिचेत्- ಅವ+ಸಿಚ್ ಧಾತು, ವಿಧಿಲಿಙ್ ಲಕಾರ, ಪ್ರಥಮ ಪುರುಷ, ಏಕವಚನ. 2) प्रहिणु- ಪ್ರ+ಹಿ ಧಾತು, ಲೋಟ್ ಲಕಾರ, ಮಧ್ಯಮ ಪುರುಷ, ಏಕವಚನ.

2) ಸಮಾಸಗಳು :

1) अश्रुतभूमसीमाम् — अश्रुता भूम्नः सीमा यस्याः सा अश्रुतभूमसीमा, ताम् (ಬಹುವ್ರೀಹಿ)

2) सरोजान्तर्वासाम् — सरोजस्य अन्तः वासः यस्याः सा, ताम् (ಷಷ್ಠೀ ತತ್ಪುರುಷ, ಬಹುವ್ರೀಹಿ)

3) मुनिशापविलुप्तसंपत् — मुनेः शापेन विलुप्ता सम्पत् यस्य सः (ಷಷ್ಠೀ ತತ್ಪುರುಷ, ಬಹುವ್ರೀಹಿ)

4) मुखपाणिपादम् — मुखं च पाणी च पादौ च एतेषां समाहारः मुखपाणिपादम् (ಸಮಾಹಾರದ್ವಂದ್ವ)

5. ಕಠಿಣ ಪದಗಳ ಅರ್ಥ :

सरोज–ಕಮಲ चित:–ಚೇತನ नृवाहन–ಕುಬೇರ

* * * * *

ಅನುಬಂಧ :

## ವ್ಯಾಕರಣ ಭಾಗ

ಮುಂದಿನ ರೀತಿಯಲ್ಲಿ ಪಿ. ಯು. ಸಿ. ಮೊದಲನೆ ವರ್ಷದಲ್ಲಿ ವ್ಯಾಕರಣ ಪ್ರಶ್ನೆಗಳಿರುತ್ತವೆ :

1. 1) ಸಂಧಿ ಬಿಡಿಸಿ ಮತ್ತು ಹೆಸರಿಸಿ ಉದಾ : भूयोऽपि ।
   2) ಸಂಧಿ ಸೇರಿಸಿ ಮತ್ತು ಹೆಸರಿಸಿ. ಉದಾ : यतः + त्वया ।
2. 1) ಸ್ತ್ರೀಲಿಂಗ ರೂಪ ಕೊಡಿ : विद्वान् ।
   2) ಪುಲ್ಲಿಂಗ ರೂಪ ಕೊಡಿ : बालिका ।
3. ಗುಂಪಿನ ಪದಗಳನ್ನು ವ್ಯಾಕರಣ ರೀತ್ಯಾ ವಿಂಗಡಿಸಿ :

   भवन्ति, नृपस्य, स्नेहेन, चिराय ।
4. ವಿರುದ್ಧಾರ್ಥಕ (ನಿಷೇಧಾರ್ಥಕ ; ವಿಲೋಮಪದ) ಶಬ್ದ ಕೊಡಿರಿ :

   उन्नतिः
5. ಇವುಗಳ ಲಿಂಗ, ವಚನ, ವಿಭಕ್ತಿ ಹೇಳಿ : मातरम् ।
6. ಇವುಗಳ ಧಾತು, ಲಕಾರ, ಪುರುಷ, ವಚನ ಹೇಳಿ : पश्यन्तु ।
7. ಪ್ರಯೋಗ ಬದಲಾಯಿಸಿ :

   बालकैः शाला गम्यते ।
8. ಸಂಸ್ಕೃತ ಪರ್ಯಾಯ ಪದಗಳನ್ನು ಬರೆಯಿರಿ :

   ಎರಡನೆಯ, ಹನ್ನೆರಡು, ಹತ್ತನೆಯ, ನಾಲ್ಕು.
9. ವಾಕ್ಯದಲ್ಲಿ ಪ್ರಯೋಗಿಸಿ :

   यथा-तथा, यावत्-तावत् ।
10. 1) ವಿಗ್ರಹ ವಾಕ್ಯವನ್ನು ಬರೆಯಿರಿ : मानहेतोः ।
    2) ಸಮಾಸದ ಹೆಸರು ತಿಳಿಸಿ : राज्ञः + पुत्रः ।

ತ್ರರನ್ನು ಗಂಗಾ ನ್ನಾತೆಯು ಕೃಪೆಯಿಂದ ಉದ್ಧರಿಸಿ ಅವರಿಗೆ ಪುಣ್ಯ ದೊರೆಯುವಂತೆ ಮಾಡಿದ ಅಂಶವನ್ನು ತಿಳಿಯಬಹುದಾಗಿದೆ, ಈ ಲ್ಲಿ

2) ಕಥೆಯ ಆಕರ : ಮಹರ್ಷಿ ವಾಲ್ಮೀಕಿ ವಿರಚಿತ 'ರಾಮಾಯಣ'ದ ಆಧಾರದ ಮೇಲೆ ಪಿ. ವಿ. ಕಾಣೆಯವರು 'ಸಂಸ್ಕೃತ ಗದ್ಯಾವಳಿ' ಎಂಬ ಗ್ರಂಥವನ್ನು ರಚಿಸಿದ್ದಾರೆ. ಈ ಗ್ರಂಥದಿಂದ ಈ ಕಥೆಯನ್ನು ಆರಿಸಲಾಗಿದೆ

3) i) ಕಥೆಯ ಪಾತ್ರಪರಿಚಯ :

ಕ) ಸಗರ : ಧರ್ಮಾತ್ಮನಾದ ರಾಜ, ಇವನಿಗೆ ಕೇಶಿನೀ, ಸುಮತಿ ಪತ್ನಿಯರು, ಇವನಿಗೆ ಅಸಮಂಜ ಮತ್ತು ಅರವತ್ತು ಸಹಸ್ರ ಮಕ್ಕಳು, ಇವನಿಗೆ ಅಂಶುಮಾನ್ ಮೊಮ್ಮಗ. ಭೃಗುಮಹರ್ಷಿಯಿಂದ ಅನುಗೃಹೀತ ನಾದವನು. ಇವನು ಯಜ್ಞಮಾಡಿ ಸ್ವರ್ಗಸುಖವನ್ನು ಅನುಭವಿಸಿದ.

ಖ) ಕೇಶಿನೀ ಮತ್ತು ಸುಮತಿ : ಸಗರನ ರಾಣಿಯರು; ಹಿರಿಯ ರಾಣಿ ಕೇಶಿನಿಯ ಮಗ ಅಸಮಂಜ, ಕಿರಿಯಳಾದ ಸುಮತಿಯ ಮಕ್ಕಳು ಅರವತ್ತು ಸಹಸ್ರ ಮಂದಿ. ಭೃಗುಋಷಿಯ ಅನುಗ್ರಹದಿಂದ ಮಕ್ಕಳನ್ನು ಪಡೆದಿದ್ದರು.

ಗ) ಭೃಗು : ಸಗರಮಹಾರಾಜನ ತಪಸ್ಸಿಗೆ ಮೆಚ್ಚಿ ಪ್ರತ್ಯಕ್ಷನಾಗಿ ವರವನ್ನು ಕರುಣಿಸಿದ ಮಹಾನುಭಾವ.

ಘ) ಅಸಮಂಜ : ಸಗರನ ಹಿರಿಯ ರಾಣಿ ಕೇಶಿನಿಯಲ್ಲಿ ಭೃಗುವಿನ ಅನುಗ್ರಹದಿಂದ ಹುಟ್ಟಿದವನು. ಪ್ರಜಾ ಪೀಡಕನೆನಿಸಿದನು. ಅಂಶುಮಾನ್ ಇವನ ಮಗ.

ಙ) ಅಂಶುಮಾನ್ : ಅಸಮಂಜನ ಮಗ, ತಾತ ಸಗರನ ಯಜ್ಞಾಶ್ವವನ್ನು ಹುಡುಕಿ ತಂದವನು.

ಚ) ವಾಸವ : ಇಂದ್ರ, ಸಗರನ ಯಜ್ಞಾಶ್ವವನ್ನು ರಾಕ್ಷಸರೂಪದಿಂದ ಅಪಹರಿಸಿ ಪಾತಾಳದಲ್ಲಿ ಕಪಿಲನ ಆಶ್ರಮದ ಬಳಿ ಇಟ್ಟನು. ಕಪಿಲನ ಕೋಪಕ್ಕೆ ಸಗರನ ಅರವತ್ತು ಸಹಸ್ರಮಕ್ಕಳು ಭಸ್ಮವಾಗುವಂತೆ ಮಾಡಿದನು.

ಛ) ಕಪಿಲ : ವಾಸುದೇವನ ಸೋಸೆಯಾದ ವಸುಧೆಯ ಕೋಪದಿಂದ ಸಗರಪುತ್ರರನ್ನು ಸಂಹಾರ ಮಾಡಿದನು.

ಜ) ವೈನತೇಯ : ಗರುಡ, ಈತನ ತಂಗಿ ಸಗರನ ರಾಣಿಯ ಸುಮತಿ, ಸಗರಪುತ್ರರ ಪುಣ್ಯಲೋಕ ಪ್ರಾಪ್ತಿಗಾಗಿ ಗಂಗೆಯನ್ನು ಭೂಮಿಗೆ ತರಲು ಅಂಶುಮಾನನಿಗೆ ತಿಳುಹಿಸಿದನು.

ಝ) ದಿಲೀಪ : ಅಂಶುಮಾನನ ಮಗ.

ಞ) ಭಗೀರಥ : ದಿಲೀಪನ ಮಗ ; ಸಗರಪುತ್ರರಿಗೆ ಗಂಗಾಕೃಪೆಯಿಂದ ಪುಣ್ಯಲೋಕವು ದೊರೆಯುಂತೆ ಮಾಡಿದನು.

ii) ಪದಗಳ ಅರ್ಥ : दृढधन्वा – ದೃಢವಾದ ಬಿಲ್ಲುಳ್ಳವನು
कापिलं – ಕಪಿಲನಿಗೆ ಸಂಬಂಧಿಸಿದ रसातल – ಪಾತಾಳ ಲೋಕ
खनित्रं – ಗುದ್ದಲಿ जलक्रिया – ತರ್ಪಣ

4. ಕಥೆಯ ಪ್ರಶ್ನೋತ್ತರ :

1). ಸಗರ ಮಹಾರಾಜನ ಪರಿವಾರದ ಪರಿಚಯ ಮಾಡಿಕೊಡಿ.

ಸಗರನು ಒಬ್ಬ ಚಕ್ರವರ್ತಿ. ಈತನಿಗೆ ಇಬ್ಬರು ರಾಣಿಯರಿದ್ದರು. ಒಬ್ಬಳು ವಿದರ್ಭರಾಜನ ಮಗಳು ಕೇಶಿನಿ ಎಂಬುವಳು. ಮತ್ತೊಬ್ಬಳು, ಗರುಡನ ತಂಗಿಯಾದ ಸುಮತಿ. ಇವರಿಗೆ ಮಕ್ಕಳಾಗಲಿಲ್ಲ. ಚಕ್ರವರ್ತಿಯು ರಾಣಿಯರೊಡಗೂಡಿ ಭೃಗುಋಷಿಯನ್ನು ಕುರಿತು ತಪಸ್ಸು ಮಾಡಿದನು ಋಷಿಯ ಅನುಗ್ರಹದಿಂದ ಕೇಶಿನಿಯು ವಂಶವೃದ್ಧಿಕರನಾದ ಅಸಮಂಜನೆಂಬ ಮಗನನ್ನೂ ಸುಮತಿಯು ಅರವತ್ತು ಸಹಸ್ರಜನ ಮಕ್ಕಳನ್ನೂ ಪಡೆದರು.

2) ಅಸಮಂಜನು ಯಾರು ? ಸಗರನು ಈತನನ್ನು ರಾಜ್ಯಭ್ರಷ್ಟನನ್ನಾಗಿಸಲು ಕಾರಣವೇನು ? ಅಸಮಂಜನು, ಭೃಗುಋಷಿಯ ಅನುಗ್ರಹದಿಂದ ಸಗರ ಚಕ್ರವರ್ತಿಗೆ, ಈತನ ಹಿರಿಯರಾಣಿ ಕೇಶಿನಿಯಲ್ಲಿ ಹುಟ್ಟಿದನು, ಈತನು ಪ್ರಜಾಪೀಡಕನಾದನು. ಪ್ರಜೆಗಳ ಮಕ್ಕಳನ್ನು ಬಾವಿಗೆ ತಳ್ಳುವುದು ಪ್ರಜೆಗಳ ಸ್ವತ್ತನ್ನಪಹರಿಸುವುದು, ಹಿಂಸಿಸುವುದು ಮುಂತಾದ ಅಸಂಗತ–ಅಯೋಗ್ಯ–ಪ್ರಜಾಪೀಡನ ಕಾರ್ಯಗಳನ್ನು ಮಾಡುತ್ತಿದ್ದ ಕಾರಣ, ಸಗರನು, ಅಸಮಂಜನನ್ನು ರಾಜ್ಯಭ್ರಷ್ಟನನ್ನಾಗಿಸಿದನು.

3) ಸಗರನ ಯಜ್ಞಾಶ್ವವನ್ನಪಹರಿಸಿದವನಾರು ? ಅದನ್ನು ಎಲ್ಲಿ ಇಟ್ಟಿದ್ದನು ? ಹೀಗೆ ಮಾಡಲು ಕಾರಣವೇನಿತ್ತು ?

ಸಗರನು ಯಷ್ಟಿ (ಯಜ್ಞ) ಯನ್ನು ಮಾಡಲಿಷ್ಟಪಟ್ಟು ಯಜ್ಞಾಶ್ವವಸ್ತ್ರ ಯೊಂದಿಗೆ ಯಜ್ಞಾಶ್ವವನ್ನು ದೇಶದ ಮೇಲೆ ವಿಜಯಾಪೇಕ್ಷೆಯಿಂದ ಬಿಟ್ಟನು. ಅಶ್ವದ ಬೆಂಗಾವಲಿಗಾಗಿ ಸಗರನ ಅರವತ್ತು ಸಹಸ್ರಪುತ್ರರು ಸಕಲಸಿದ್ಧತೆ ಯೊಡನೆ ಹೊರಟರು. ಇಂದ್ರನು, ಸ್ವರ್ಗಾಧಿಕಾರವನ್ನು ಸಗರನು ಅಪಹರಿಸುವನೆಂಬ ಭೀತಿಯಿಂದ ರಾಕ್ಷಸರೂಪ ಧರಿಸಿ ಬಂದು ಯಜ್ಞಾಶ್ವವನ್ನು ಅಪಹರಿಸಿದನು. ಅಶ್ವವನ್ನು ಇಂದ್ರನು ಕಪಿಲಾಶ್ರಮದ ಬಳಿ ಇಟ್ಟಿದ್ದನು. ಕಪಿಲನು ಕೋಪಾವಿಷ್ಟವ್ಯಕ್ತಿಯೆಂದು ಇಂದ್ರನಿಗೆ ಗೊತ್ತಿತ್ತು. ಕಪಿಲನು, ದೇವತೆಗಳ ರಕ್ಷಕನಾದ ಮಹಾವಿಷ್ಣು ಸ್ವರೂಪಿಯೆಂದು ಅವನು ಅರಿತಿದ್ದನು ದೇವಕಾರ್ಯಸಾಧಿತವಾಗಿ ಲೋಕಕಂಟಕರಸಂಹಾರವಾಗುತ್ತದೆಂದು ಇಂದ್ರನ ನಂಬಿಕೆಯಾಗಿತ್ತು.

4. i) ಸಗರಪುತ್ರರು ಏಕೆ ಉಪಟಳವಮಾಡಲೆತ್ನಿಸಿದರು ? ಇದರ ಪರಿಣಾಮವೇನಾಯಿತು ? ii) ಕಪಿಲನು ಯಾರು ? ಸಗರಪುತ್ರರನ್ನೇಕೆ ಸಂಹಾರಮಾಡಿದನು ? iii) ಸಗರಪುತ್ರರ ಸಾವೇಕುಂಟಾಯಿತು ?

ಸಗರನ ಯಜ್ಞಾಶ್ವವನ್ನು ಇಂದ್ರನು ಅಪಹರಿಸಿದನು. ಯಜ್ಞಾಶ್ವವನ್ನು ಹುಡುಕಲು ಸಗರನಿಂದ ಆಜ್ಞಪ್ತರಾದ ಅರವತ್ತು ಸಹಸ್ರ ಸಗರಪುತ್ರರು ಜಂಬೂದ್ವೀಪವನ್ನು ಅಗೆದು ಲೋಕಕಂಟಕರಾದರು. ದೇವತೆಗಳು ನಾಗರು ಅಸುರರು ಕಿನ್ನರ ಕಿಂಪುರುಷರೂ ಪೀಡಿತರಾದರು. ದೇವತೆಗಳು ಇವರೆಲ್ಲರೊಡಗೂಡಿ ಬ್ರಹ್ಮನನ್ನು ಸಂರಕ್ಷಣಾರ್ಥವಾಗಿ ಪ್ರಾರ್ಥಿಸಿದರು. ಬ್ರಹ್ಮನು ಬ್ರಹ್ಮಾಂಡಸಂರಕ್ಷಕನಾದ ಮಹಾವಿಷ್ಣುವು ಕಪಿಲರೂಪದಿಂದ ರಸಾತಲದಲ್ಲಿರುವನು. ಸಗರನ ಯಜ್ಞಾಶ್ವವೂ ಕಪಿಲಾಶ್ರಮದ ಸನಿಹದಲ್ಲಿದೆ. ಕಪಿಲನಿಂದ ಈ ಲೋಕ ಕಂಟಕರ ಸಂಹಾರವಾಗುವುದೆಂದನು. ಸಗರಪುತ್ರರು ಭೂಮಿಯನ್ನು ಅಗೆದು ರಸಾತಲಕ್ಕೆ ತಲುಪಿ, ಅಲ್ಲಿ ಯಜ್ಞಾಶ್ವವನ್ನು ಕಂಡರು. ಕಪಿಲನೇ ಯಜ್ಞಾಶ್ವ ಚೋರನೆಂದು ಹುಯ್ಲೆಬ್ಬಿಸಿದರು. ತಪೋಭಂಗವಾಗಿ ಕಪಿಲನು ಶಾಪವಿತ್ತನು. ಸಾಗರರು ಆತನ ಕೋಪಾಗ್ನಿಯಿಂದ

ಭಸ್ಮೀಭೂತರಾದರು.

5) ಅಂಶುಮಾನನು ಯಾರು ? ಇವನು ಸಗರನ ಅಪ್ಪಣೆಯಿಂದ ಯಾವ ಕಾರ್ಯಕ್ಕೆ ನಿಯುಕ್ತನಾದನು ? ಇವನು ಯಜ್ಞಾಶ್ವವನ್ನು ಹೇಗೆ ಮತ್ತು ಎಲ್ಲಿ ಕಂಡನು ?

ಅಂಶುಮಾನನು, ಭೃಗುಮಹರ್ಷಿಯ ಕೃಪೆಯಿಂದಾಗಿ ಸಗರಚಕ್ರವರ್ತಿಯಿಂದ, ಅವನ ಹಿರಿಯರಾಣಿ ಕೇಶಿನಿಯ ಗರ್ಭಸಂಭೂತನಾದ ಅಸಮಂಜನ ಸುಪುತ್ರನು. ಯಜ್ಞಾಶ್ವವು ಅಪಹೃತವಾದ ಮೇಲೆ, ಅದನ್ನು ಹುಡುಕಲು ಹೋದ ಅರವತ್ತು ಸಹಸ್ರಮಂದಿ ಪಿತೃವ್ಯರು ಹಿಂದಿರುಗದಿರಲು, ಅಶ್ವವನ್ನೂ ಇವರನ್ನೂ ಹುಡುಕಿ ತರಲು ತಾತ ಸಗರನಿಂದ ಆಜ್ಞಪ್ತನಾಗಿ ಅಂಶುಮಾನನು ಹೊರಟನು. ಈತನು ಸಗರಪುತ್ರರು ಅಗೆದಿದ್ದ ಭೂಮಾರ್ಗವಾಗಿ ರಸಾತಲವನ್ನು ತಲುಪಿ, ಅಲ್ಲಿ ಯಜ್ಞಾಶ್ವವನ್ನೂ ಕಪಿಲನ ಕೋಪದಿಂದ ದಗ್ಧರಾಗಿದ್ದ ಸಗರಪುತ್ರರ ಭಸ್ಮರಾಶಿಯನ್ನೂ ಕಂಡನು. ಕಪಿಲಾನುಗ್ರಹವನ್ನು ಹೊಂದಿ, ಯಜ್ಞಾಶ್ವದೊಡನೆ ಸಗರನಲ್ಲಿಗೆ ಹಿಂದಿರುಗಿ ಬಂದು ಸಮಸ್ತ ವೃತ್ತಾಂತವನ್ನು ನಿವೇದಿಸಿದನು.

6) ಅಂಶುಮಾನನು ಪಕ್ಷಿರಾಜನೂ, ಸಗರಪುತ್ರರ ಸೋದರಮಾವನೂ ಆದ ಗರುಡನನ್ನು ಕಂಡ ಸಂದರ್ಭವಾವುದು ? ಗರುಡನು ಅಂಶುಮಾನನಿಗೆ ತಿಳುಹಿಸಿದ ಸಂಗತಿ ಯಾವುದು ?

ಸಗರನಿಂದ ಯಜ್ಞಾಶ್ವವನ್ನು ಹುಡುಕಿ ತರಲು ಆಜ್ಞಪ್ತನಾಗಿ ಹೊರಟ ಅಂಶುಮಾನನು, ಸಗರಪುತ್ರರಿಂದ ಅಗೆದ ಭೂಮಾರ್ಗವಾಗಿ ರಸಾತಲವನ್ನು ತಲುಪಿದನು. ಅಲ್ಲಿ ಯಜ್ಞಾಶ್ವವನ್ನೂ, ಕಪಿಲನ ಕ್ರೋಧಾಗ್ನಿಯಿಂದ ಭಸ್ಮೀಭೂತರಾದ ಅರವತ್ತು ಸಹಸ್ರ ಸಗರಪುತ್ರರ ಭಸ್ಮರಾಶಿಯನ್ನೂ ಕಂಡು ದುಃಖಿತನಾದನು. ಈ ಭಸ್ಮರಾಶಿಯನ್ನು ಜಲದಲ್ಲಿ ಕದಡಲು ಜಲವನ್ನು ಅಂಶುಮಾನನು ಹುಡುಕಿದನು. ಆಗ, ಗರುಡನು, ದರ್ಶನಕೊಟ್ಟು ಸ್ವರ್ಗದಿಂದ ಗಂಗೆಯನ್ನು ಭೂಮಿಗೆ ಇಳಿಸಿ ಗಂಗಾಜಲದಿಂದ ಈ ಭಸ್ಮರಾಶಿಯನ್ನು ಕರಗಿಸಿದಲ್ಲಿ ಇವರಿಗೆ ಸದ್ಗತಿಯುಂಟಾಗುವುದೆಂದು ಹೇಳಿದನು. ಅಂಶುಮಾನನು ಈ ಕಾರ್ಯವು ಹೇಗೆ ಸಾಧ್ಯವಾದೀತೆಂದು ಯೋಚಿಸುತ್ತ ಯಜ್ಞಾಶ್ವ

ಜೊಂದಿಗೆ ಸಗರನಲ್ಲಿಗೆ ಓಡಿಬರುಗಿದನು.

7) ಭಗೀರಥನು ಯಾರು ? ಈತನು ಬ್ರಹ್ಮನನ್ನು ಕುರಿತು ಏಕೆ ತಪಸ್ಸು ಮಾಡಿದನು ? ಇದರ ಪರಿಣಾಮವೇನಾಯಿತು ?

ಸಗರ ಕೇಶಿನಿಯರ ಪುತ್ರ ಅಸಮಂಜಸನ ಮಗ ಅಂಶುಮಾನನ ಮಗ ದಿಲೀಪನ ಮಗ ಭಗೀರಥನು. ಈತನು, ತನ್ನ ಹಿರಿಯರು ಯಾರಿಂದಲೂ ಪಿತೃವ್ಯ ಸಗರಪುತ್ರರಿಗೆ ಸ್ವರ್ಗಸೌಖ್ಯ ದೊರೆಯದಿದ್ದುದಕ್ಕಾಗಿ ವ್ಯಥೆಗೊಂಡು ತಾನು ಏನೇ ಆಗಲಿ, ಯಾವ ಕಷ್ಟವಾದರೂ ಸರಿ, ತಾನು ಸಗರಪುತ್ರರಿಗೆ ಪುಣ್ಯಲೋಕಪ್ರಾಪ್ತಿಯಾಗುವಂತೆ ಮಾಡಲೇ ಬೇಕೆಂದು ಸಂಕಲ್ಪಿಸಿ, ಸಾಮ್ರಾಜ್ಯವನ್ನು ಮಂತ್ರಿಗಳಿಗೆ ಒಪ್ಪಿಸಿ ಗೋಕರ್ಣಕ್ಷೇತ್ರಕ್ಕೆ ಹೋಗಿ ಒಂದು ಸಾವಿರ ವರ್ಷಕಾಲ ಬ್ರಹ್ಮನನ್ನು ಕುರಿತು ತಪಸ್ಸು ಮಾಡಿದನು. ಬ್ರಹ್ಮನು ಪ್ರತ್ಯಕ್ಷನಾಗಿ ವರ ಕೇಳಲು ಹೇಳಿದನು ಮತ್ತು ಭೂಮಿಯ ಮೇಲೆ ಗಂಗೆಯನ್ನು ಕರೆತರುವ ಉಪಾಯವನ್ನು ಹೇಳಿದನು.

8) ಬ್ರಹ್ಮನ ಮಾತಿನಂತೆ ಭಗೀರಥನು ಈಶ್ವರನನ್ನು ಕುರಿತು ತಪಸ್ಸು ಮಾಡಿ ಏನು ಬೇಡಿದನು ?

ಬ್ರಹ್ಮನು, ಭಗೀರಥನ ತಪಸ್ಸಿಗೆ ಮೆಚ್ಚಿ ಅವನ ಇಷ್ಟಾರ್ಥವನ್ನು ತಿಳಿದನು. ಸ್ವರ್ಗದಿಂದ ಇಳಿಯುವ ಗಂಗೆಯ ರಭಸವನ್ನು ಶಿವನು ಮಾತ್ರ ತನ್ನ ಜಟೆಯಲ್ಲಿ ತಡೆಯಲು ಅರ್ಹನೆಂದು ಸಲಹೆ ಮಾಡಿದನು. ಮತ್ತೆ ಭಗೀರಥನು ಶಿವನನ್ನು ಕುರಿತು ತಪಗೈದನು. ಶಿವನು ಪ್ರತ್ಯಕ್ಷನಾಗಿ, "ಭಗೀರಥನೇ, ನಿನ್ನ ಇಚ್ಛೆಯಂತಾಗಲಿ. ನಾನು ಗಂಗೆಯನ್ನು ನನ್ನ ಜಟೆಯಲ್ಲಿ,ಧರಿಸುವೆನು," ಎಂದನು.

9) ಗಂಗೆಯು ಸ್ವರ್ಗದಿಂದ ಭೂಮಿಗೆ ಇಳಿದು ಬಂದ ಸನ್ನಿವೇಶವು ಹೇಗೆ ವರ್ಣಿತವಾಗಿದೆ ?

ಬ್ರಹ್ಮನಿಂದ ಅನುಗೃಹೀತನಾಗಿ, ಶಿವಕರುಣೆಯನ್ನು ಹೊಂದಿ ಗಂಗೆಯನ್ನು ಭೂಮಿಗೆ ಬರುವಂತೆ 'ಇಳಿದು ಬಾ ತಾಯೆ, ಇಳಿದು ಬಾ' ಎಂದು ಬೇಡಿದನು. ಗಂಗೆ, ಶಿವನನ್ನೂ ತೇಲಿಸಿಕೊಂಡು ಧಾವಿಸುವೆನೆಂದು ಸಂಕಲ್ಪಿಸಿ ಭೂಮಿಗೆ ರಭಸದಿಂದ ಇಳಿಯಲನುವಾದಳು. ಆದರೆ ಶಿವನ ಜಟೆಯಲ್ಲಿ ಸಿಕ್ಕಿ

ಅಲ್ಲಿಯೇ ಇರುವಂತಾದಳು. ಆಗ, ಭಕ್ತ ಭಗೀರಥನ ಮೇಲೆ ದಯೆ ತೋರಿಸಿದನು, ಬಿಂದು ಸರಸ್ಸಿನಲ್ಲಿ ಗಂಗೆಯನ್ನು ಇಳಿಸಿದನು. ಅಲ್ಲಿಳಿದ ಗಂಗೆ ಏಳು ಧಾರೆಗಳಲ್ಲಿ ಹರಿಯಲುಪಕ್ರಮಿಸಿದಳು. ಹ್ರಾದಿನೀ, ಪಾವನಿ, ನಲಿನೀ ಈ ಮೂರು ಧಾರೆಯ ರೂಪದಲ್ಲಿ ಪೂರ್ವದಿಕ್ಕಿಗೆ ಹರಿದಳು; ಸುಚಕ್ಷು, ಸೀತಾ, ಸಿಂಧುವೆಂಬ ಹೆಸರಿನಿಂದ ಪಶ್ಚಿಮದಿಕ್ಕಿಗೆ ಪ್ರವಹಿಸಿದಳು. ಏಳನೇ ಧಾರೆಯಾಗಿ ರಥವೇರಿ ಭಗೀರಥನನ್ನು ಅನುಸರಿಸಿದಳು. ಹೀಗೆ ಗಂಗೆ ಇಳಿದು ಬಂದಳು.

10) i) ಗಂಗೆಯು, ಯಾವ ಅಪರಾಧ ಮಾಡಿದಳು ? ಇದಕ್ಕಾಗಿ ಅವಳು ಯಾವ ಶಿಕ್ಷೆಯನ್ನು ಅನುಭವಿಸಬೇಕಾಯಿತು ?

ii) ಗಂಗೆಯು, ಜಾಹ್ನವಿಯಾದುದು ಹೇಗೆ ?

ಭಗೀರಥನ ಬಯಕೆಯಂತೆ, ಹರನ ಜಟಾಜೂಟದಿಂದ ಹೊರಟು ಸಪ್ತ ಧಾರೆಗಳಲ್ಲಿ ಮೂರು ಮೂರು ರೂಪಗಳಲ್ಲಿ ಪೂರ್ವ–ಪಶ್ಚಿಮವಾಗಿ ಹರಿದು, ಏಳನೇ ರೂಪದಲ್ಲಿ ಭಗೀರಥನನ್ನು ಅನುಸರಿಸಿ ಹೊರಟಳು. ಅಲ್ಲಿಂದ ಬರುತ್ತಾ ದಾರಿಯಲ್ಲಿ ಜಹ್ನುಋಷಿಯ ಆಶ್ರಮವನ್ನು ತೇಲಿಸಿಬಿಟ್ಟಳು. ರೋಷಗೊಂಡ ಋಷಿಯು, ಗಂಗೆಯನ್ನು ಆಪೋಶನವಾಗಿ ತೆಗೆದುಕೊಂಡನು. ಭಗೀರಥನ ಬೇಡಿಕೆ, ದೇವ–ಗಂಧರ್ವ–ಋಷಿಮುನಿಗಳ ಪ್ರಾರ್ಥನೆಯನ್ನು ಮನ್ನಿಸಿ ಕಿವಿಯ ದ್ವಾರದಿಂದ ಹೊರಡಿಸಿದನು. ಇಂತು ಗಂಗೆಯು ಋಷಿಯ ಕರ್ಣದ್ವಾರದಿಂದ ಹೊರಟು ಜಾಹ್ನವಿಯಾದಳು.

11) ಭಗೀರಥನ ಬಯಕೆಯು ಹೇಗೆ ಈಡೇರಿತು ?

ಭಗೀರಥನ ಪ್ರಾರ್ಥನೆಯಂತೆ, ಅವನನ್ನು ಹಿಂಬಾಲಿಸಿ ಬಂದ ಗಂಗೆ ಸಮುದ್ರವನ್ನು ಸೇರಿ ಪಾತಾಳದಲ್ಲಿ ಹರಿಯಲಾರಂಭಿಸಿದಳು. ಅಲ್ಲಿ ಸಗರ ಪುತ್ರರ ಭಸ್ಮರಾಶಿಯ ಮೇಲೆ ಹರಿದು ಅವರನ್ನು ಪವಿತ್ರಗೊಳಿಸಿ ಅವರಿಗೆ ಪುಣ್ಯಲೋಕ ಪ್ರಾಪ್ತಿಯಾಗಲು ಸಹಾಯ ಮಾಡಿದಳು. ಹೀಗೆ ಭಗೀರಥನ ಮನೋರಥವು ಈಡೇರಿತು.

12). ಗಂಗೆಯು ಭಾಗೀರಥೀಯೆಂದು ಪ್ರಸಿದ್ಧಳಾದುದು ಹೇಗೆ ?

ಸಗರನ ಯಜ್ಞಾಶ್ವವನ್ನು ಹುಡುಕ ಹೊರಟ ಅರುವತ್ತು ಸಾವಿರ ಸಗರ ಪುತ್ರರು ಜಂಬೂದ್ವೀಪ – ಭೂಮಂಡಲವನ್ನಗೆದು ಪಾತಾಳ–ರಸಾತಳವನ್ನು

ಸೇರಿ, ಅಲ್ಲಿ ಯಜ್ಞಾಶ್ವವನ್ನು ಕಂಡರು. ಅದು ಕಪಿಲಋಷಿಯ ಆಶ್ರಮದ ಬಳಿಯಿತ್ತು. ಕಪಿಲನೇ ಅಶ್ವಚೋರನೆಂದು ಹುಯ್ಲಿಬ್ಬಿಸಿ, ಋಷಿಯ ಶಾಪದ ಪರಿಣಾಮವಾಗಿ ಭಸ್ಮೀಭೂತರಾದರು. ಸಗರನ ಮೊಮ್ಮಗ ಅಂಶುಮಾನನ ಪ್ರಯತ್ನದಿಂದ, ಇವರಿಗೆ ಗಂಗಾಪ್ರವಾಹದಿಂದ ಪುಣ್ಯಲೋಕಪ್ರಾಪ್ತಿಯೆಂದು ತಿಳಿಯಿತು. ಸಗರ–ಅಂಶುಮಾನ್–ದಿಲೀಪಾದಿಗಳಿಂದ ಈ ಪ್ರಯತ್ನ ಸಫಲವಾಗಲಿಲ್ಲ. ಕಡೆಗೆ, ಭಗೀರಥನು, ಬ್ರಹ್ಮದೇವನ ದಯೆ, ಶಿವಕೃಪೆ, ಜಹ್ನು ಕರುಣೆಯಿಂದ ಗಂಗೆಯನ್ನು ಪಾತಾಳ–ರಸಾತಳಕ್ಕೆ ಕರೆದೊಯ್ದು ತನ್ನ ಪಿತೃಗಳಿಗೆ ಪುಣ್ಯಲೋಕ ದೊರೆಯುವಂತೆ ಮಾಡಿದನು. ಈ ಕಾರಣದಿಂದ ಗಂಗೆ 'ಭಾಗೀರಥೀ' ಹೆಸರನ್ನು ಪಡೆದಳು- ಇದರಿಂದ ಕಷ್ಟದ ಫಲ ವ್ಯರ್ಥವಲ್ಲವೆಂದು ತಿಳಿಯುತ್ತದೆ.

13) i) ಸಗರಪುತ್ರರಿಗೆ ಉಂಟಾದ ಶಿಕ್ಷೆ ಯಾವುದು ? ಕೊನೆಯಲ್ಲಿ ಅವರಿಗೆ ಪುಣ್ಯಲೋಕ ಪ್ರಾಪ್ತಿಯಾದುದು ಹೇಗೆ 'ಭಗೀರಥ ಪ್ರಯತ್ನ' ಗಾದೆಯು ಹೇಗೆ ಹುಟ್ಟಿತು ? ii) 'स्वर्गङ्गा भुवमागता' ಕಥೆಯ ಆಧಾರದ ಮೇಲೆ, 'ಕಷ್ಟಪಟ್ಟರೆ ಫಲವುಂಟು' ಎಂಬುದನ್ನು (ಕೈ ಕೆಸರಾದರೆ ಬಾಯಿ ಮೊಸರು ಗಾದೆಯನ್ನು) ಸಮರ್ಥಿಸಿ. [ಸೂ : 12 ನೇಪ್ರಶ್ನೆಯ ಉತ್ತರವನ್ನೇ ಬರೆಯಿರಿ]

14) ಬ್ರಹ್ಮನು, ಭಗೀರಥನಿಗೆ ಕೊಟ್ಟ ವರದಾನವಾವುದು ?

ಭಗೀರಥನು, ತನ್ನ ಹಿರಿಯರಾದ ಅರವತ್ತುಸಹಸ್ರ ಸಗರಪುತ್ರರಿಗೆ ಪುಣ್ಯಲೋಕ ಪ್ರಾಪ್ತಿಗಾಗಿ, ಪರಿಶ್ರಮವಹಿಸಿ ಬ್ರಹ್ಮ, ಶಿವರನ್ನು ಕುರಿತು ತಪಗೈದು ಗಂಗೆಯನ್ನು ಸ್ವರ್ಗದಿಂದ ಭೂಮಿಗೆ ಇಳಿಸಿ ಸಫಲಮನೋರಥನಾದನು. ಬ್ರಹ್ಮನು ಸಂತುಷ್ಟಮಾನಸನಾಗಿ ಹೀಗೆ ನುಡಿದನು: "ಎಲೈ ಭಗೀರಥನೇ, ನಿನ್ನ ಹಾಗೂ ಗಂಗೆಯ ಕೀರ್ತಿ ಅಜರಾಮರವಾದುದು. ಸೂರ್ಯ-ಚಂದ್ರ-ಹಿಮವಂತನು ಈ ಭೂಲೋಕದಲ್ಲಿರುವ ಪರ್ಯಂತ ಶಾಶ್ವತತೆ ನಿನಗುಂಟಾಗಲಿ. ಈ ಲೋಕದಲ್ಲಿ ಗಂಗೆಯು, 'ಭಾಗೀರಥೀ' ಎಂಬ ಹೆಸರಿನಿಂದ ಚಿರಸ್ಥಾಯಿಯಾದ ಹೆಸರನ್ನು ಹೊಂದಲಿ." ಹೀಗೆ ಹೇಳಿ ಬ್ರಹ್ಮಲೋಕಕ್ಕೆ ತೆರಳಿದನು.

5. ಕಥೆಯ ನೀತಿ : ಮಹಾತ್ಮರು, ಲೋಕದ ಕ್ಷೇಮಕ್ಕಾಗಿ ಕಷ್ಟಗಳನ್ನು ಅನುಭವಿಸುತ್ತಾರೆ. ಕಷ್ಟಪಟ್ಟರೆ ಫಲ. ಶ್ರಮದ ಫಲವ್ಯರ್ಥವಾಗುವುದಿಲ್ಲ.

## 2 वीरोचितमुपायनम्

## [ ವೀರನಿಗೆ ಯೋಗ್ಯವಾದ ಬಹುಮಾನ ]

1. ಕಥೆಯುಲ್ಲಿ : ಪೂರ್ವ ಸಮುದ್ರತೀರದಲ್ಲಿದ್ದ 'ತಾಮ್ರಲಿಪ್ತಿ' ಯ ಅರಸನಾದ ಚಂಡಸಿಂಹ ಮಹಾರಾಜನು, ತನಗೆ ತನು-ಮನದಿಂದ ಸೇವೆ ಮಾಡಿದ ಸತ್ವಶೀಲನಿಗೆ, ಯೋಗ್ಯ ಬಹುಮಾನವಿತ್ತು ಅವನ ಮನಸಿಚ್ಛೆಯನ್ನು ನೆರವೇರಿಸಿದನು. ಸಜ್ಜನಿಕೆಯಿಂದ ಸಲ್ಲಿಸಿದ ಸೇವೆ ಯುಳ್ಳವನು ಸಫಲಮನೋರಥನಾಗುವುದರಲ್ಲಿ ಸಂದೇಹವಿಲ್ಲವು !

2. ಕಥೆಯ ಆಕರ : ಸಂಸ್ಕೃತಭಾಷೆಯುಲ್ಲಿರುವ 'ವೇತಾಳಪಂಚ ವಿಂಶತಿ ಕಥೆ'ಗಳಿಗೆ ಆಧಾರ, ಸೋಮದೇವಭಟ್ಟನ 'ಕಥಾ ಸರಿತ್ಸಾಗರ.' ವೇತಾಳಪಂಚವಿಂಶತಿ ಕಥೆಗಳನ್ನು ಕೀರ್ತಿಸೇನ-ಸುತಾರ್ಥೆಯರ ಮಗನಾದ ಗುಣಾಢ್ಯನು ಬರೆದಿರುವನು. ಈ ಕಥೆಗಳನ್ನು ಜೀವಾನಂದ ವಿದ್ಯಾಸಾಗರ ಭಟ್ಟಾಚಾರ್ಯರು, ಗದ್ಯದಲ್ಲಿ ಸರಳ ಸಂಸ್ಕೃತ ಭಾಷೆಯಲ್ಲಿ ರಚಿಸಿದ್ದಾರೆ. 'ವೀರೋಚಿತ ಉಪಾಯನಂ' ಇಲ್ಲಿಂದ ಆರಿಸಲಾದ ಒಂದು ಕಥೆ.

3 i) ಕಥೆಯ ಪಾತ್ರಪರಿಚಯ :

ಕ) ಚಂಡಸಿಂಹ : ಪೂರ್ವಸಮುದ್ರ ತೀರದ ತಾಮ್ರಲಿಪ್ತಿ ನಗರದ ಮಹಾರಾಜ; ಸತ್ವಶೀಲನನ್ನು ಗೌರವಿಸಿದ ಮಹಾನುಭಾವ.

ಖ) ಸತ್ವಶೀಲ : ದಕ್ಷಿಣದೇಶದ ಓರ್ವ ರಾಜಕುಮಾರ. ಚಂಡಸಿಂಹನ-ಲ್ಲಿಗೆ ಜೀವನಾರ್ಥಿಯಾಗಿ ಬಂದು ತಿರಸ್ಕೃತನಾಗಿ ಅನಂತರ ಪುರಸ್ಕೃತನಾದನು

ಗ) ಸಿಂಹಳೇಶ್ವರ : ಸಿಂಹಳದ್ವೀಪದ ಒಬ್ಬ ರಾಜ. ಇವನ ಮಗಳನ್ನು ಚಂಡಸಿಂಹನು ಮದುವೆಯಾಗಲು ಬಯಸಿ, ಸತ್ವಶೀಲನನ್ನು ತನ್ನ ಪರವಾಗಿ ಅಲ್ಲಿಗೆ ದೂತನನ್ನಾಗಿ ಕಳಿಸಿದನು.

ಘ) ಕಾಲನೇಮಿ : ಅಜ್ಞಾತ ರಾಜಕುಮಾರಿಯ ತಂದೆ. ವಿಷ್ಣು ವಿನಿಂದ ಹತನಾಗಿ ಸ್ವರ್ಗಕ್ಕೆ ಹೋದವನು.

ಙ) ವಿಶ್ವಕರ್ಮ : ದೇವತೆಗಳ ಬಡಗಿ.

ii) ಪದಗಳ ಅರ್ಥ :. 1) आखेटक–ಬೇಟೆ 2) लगुडः–ದೊಣ್ಣೆ 3) विपर्याणीकृतं– ಥಡಿಯನ್ನು ಕಳಚಿದ 4) आमलकं – ನೆಲ್ಲಿ ಕಾಯಿ 5) निष्कृतिः–ಬಿಡುಗಡೆ 6) पोतः–ದೋಣಿ 7) जाम्बूनदः – ಚಿನ್ನ 8) अब्रह्मण्यम् –ಬೊಬ್ಬೆಯಿಡು 9) निस्त्रिंशः–ಕತ್ತಿ 10) यादः–ಜಲಜಂತು 11) प्राज्य–ಹೆಚ್ಚು 12) गृहपरिच्छदः–ಮನೆಯ ಪರಿವಾರ 13) दीनारः–ನಾಣ್ಯ 14) करवालः–ಕತ್ತಿ 15) वसुधा – ಭೂಮಿ 16) उपहारः–ಕಾಣಿಕೆ 17) कङ्कालिनि–ಎಲುಬುಗಳನ್ನು ಧರಿಸಿರುವವಳು 18) उत्तमाङ्गम्–ತಲೆ 19) अवदातम्–ನಿರ್ಮಲವಾದ

4.. ಕಥೆಯ ಪ್ರಶ್ನೋತ್ತರ :

1) ಚಂಡಸಿಂಹನು ಯಾರು ? ಇವನೆಲ್ಲಿ ಆಳುತ್ತಿದ್ದನು ? ಇವನನ್ನು ಯಾರು ಬಂದು ಆಶ್ರಯಿಸಿದರು ? ಆಶ್ರಯಾರ್ಥಿಯಾಗಿ ಬಂದವನ ಆರ್ಥಿಕ ಸ್ಥಿತಿ ಹೇಗಿತ್ತು ? ಅದು ನೀಗಿದುದು ಹೇಗೆ ?

ಲೋಕದಲ್ಲಿ ನಾನಾ ಬಗೆಯ ಪರಿಸ್ಥಿತಿಯಲ್ಲಿ ಸಿಲುಕಿರುವ ಜನರಿದ್ದಾರೆ. ಅವರೆಲ್ಲರಿಗೂ ಒಂದೊಂದು ದಾರಿ ಇದ್ದೇ ಇರುತ್ತದೆ ಚಂಡಸಿಂಹನಿಗೆ ಸತ್ವಶೀಲನ ಸಹಾಯ ಅನಿವಾರ್ಯವಾಯಿತು. ಸತ್ವಶೀಲನು, ಚಂಡಸಿಂಹನಲ್ಲಿಗೆ ಆಶ್ರಯ ಬೇಡಿ ಬಂದಿದ್ದನು. ಚಂಡಸಿಂಹನು, ಪೂರ್ವಸಮುದ್ರತೀರದಲ್ಲಿದ್ದ ತಾಮ್ರಲಿಪ್ತಿನಗರದ ಅರಸನಾಗಿದ್ದನು ಸತ್ವಶೀಲನು, ದಕ್ಷಿಣದೇಶದಿಂದ ನಿರ್ಗತಿಕನಾಗಿ ಬಂದಿದ್ದ ರಾಜಕುಮಾರನು. ಮುಂದೆ ಈ ರಾಜಕುಮಾರನಿಗೆ ಮಹಾರಾಜನಿಂದ ಸನ್ಮಾನ ದೊರೆಯಿತು ; ಈತನ ಬಡತನ ನೀಗಿತು ; ರಾಜಕುಮಾರಿಯನ್ನು ಮದುವೆಯಾದನು ; ಎರಡು ಅರಮನೆಗಳ ಸ್ವಾಮ್ಯತ್ವವನ್ನು ಪಡೆದು ಸುಖಿಸಿದನು.

2) i) ಸತ್ವಶೀಲನು, ಚಂಡಸಿಂಹನಿಗೆ ಎಲ್ಲಿ ಮತ್ತು ಹೇಗೆ ಸಹಾಯ ಮಾಡಿದನು ?

ii) ಚಂಡಸಿಂಹನು ಎಲ್ಲಿ ದಾರಿ ತಪ್ಪಿದನು ? ಅವನಿಗೆ ಸಹಾಯಕನಾಗಿ ಬಂದವನಾರು ? ಅವನು ಹೇಗೆ ಸಹಾಯ ಮಾಡಿದನು ?

iii) ಸತ್ವಶೀಲನು ಯಾರು ? ಚಂಡಸಿಂಹನಿಗೆ ಯಾವ ಸಂದರ್ಭದಲ್ಲಿ ಸಹಾಯ ಮಾಡಿದನು ? ಹೇಗೆ ಸಹಾಯ ಮಾಡಿದನು ?

ಲೋಕದಲ್ಲಿ 'ಬೇಡವೆನಿಸಿದ ಹುಲ್ಲುಕಡ್ಡಿ ಯಾವಾಗ ಸಹಾಯಕ್ಕೆ ಬೇಕಾಗುತ್ತದೋ ಹೇಳುವವರಾರು ?' ಎಂದು ಅನುಭವದ ನುಡಿಯೊಂದಿದೆ. ಈ ಮಾತಿಗೆ ಚಂಡಸಿಂಹ-ಸತ್ವಶೀಲರು ಸಾಕ್ಷಿಯಾಗಿದ್ದಾರೆ.

ಸತ್ವಶೀಲನು, ದಕ್ಷಿಣದೇಶದಿಂದ ಓರ್ವ ಆರ್ಥಿಕ ದರಿದ್ರ ರಾಜಕುಮಾರ. ಪೂರ್ವ ಸಮುದ್ರತೀರದ ತಾಮ್ರಲಿಪ್ತಿಯ ಅರಸನಾದ ಚಂಡಸಿಂಹನಲ್ಲಿಗೆ ಜೀವಿಕೆಯ ಉಪಾರ್ಜನೆಗಾಗಿ ಆಶ್ರಯ ಬೇಡಿ ಬಂದನು. ಚಂಡಸಿಂಹನು, ಸತ್ವಶೀಲನ ಪ್ರಾರ್ಥನೆಯನ್ನು ಕೇಳಿಯೂ ಕೇಳದವನಂತಿದ್ದು, ತನ್ನ ಊಳಿಗದವರೊಂದಿಗೆ ಬೇಟೆಯ ಸಾಮಗ್ರಿಗಳೊಡನೆ, ಬೇಟೆಗಾಗಿ ಭೀಕರವನದತ್ತ ನಡೆದುಬಿಟ್ಟನು.

ಚಂಡಸಿಂಹನು, ಅಶ್ವಾರೋಹಿಯಾಗಿ ಮೃಗಗಳ ಬೆಂಬತ್ತಿ, ಬಹುದೂರ ಕಾಂತಾರದಲ್ಲಿ ಮುಂದುವರಿದು ಏಕಾಂಗಿಯಾಗಿ ಸಾಗಿದನು. ಈತನ ಊಳಿಗದ ಸೈನಿಕರೂ – ಬೇಟೆಗಾರರೂ ಹಿಂದುಳಿದು ಈತನನ್ನು ಹಿಂಬಾಲಿಸದವರಾದರು.

ಚಂಡಸಿಂಹನು, ಮಧ್ಯಾಹ್ನದ ಉರಿಬಿಸಿಲಲ್ಲಿ ದಣಿದನು ; ಬಳಲಿ ಬೆಂಡಾದನು. ದಾರಿ ಕಾಣದಾಯಿತು ; ಕಂಗೆಟ್ಟನು. ಆದರೆ ರಾಜನಿಗೆ ಅರಿವಾಗದ ರೀತಿಯಲ್ಲಿ ಇವನನ್ನು ಸತ್ವಶೀಲನು, ಪಾದಚಾರಿಯಾಗಿ ಓಡುತ್ತ ಬಹುಶ್ರಮದಿಂದ ಹಿಂಬಾಲಿಸುತ್ತ ಬಂದಿದ್ದನು. ರಾಜನನ್ನು, ವಿಶ್ರಮಿಸಲು, ಒಂದು ಮರದಡಿ ಕುಳಿತಿರುವಾಗ, ಕಾಣಿಸಿಕೊಂಡು 'ಪ್ರಭುವಿಗೆ, ಏನು ಸಹಾಯವಾಗಬೇಕೆಂದು ?' ಪ್ರಾರ್ಥಿಸಿದನು. ಬಾಯಾರಿಕೆಯಿಂದ ಬಳಲಿದ್ದ ಮಹಾರಾಜನು ನೀರು ಕೇಳಿದನು. ಮರವೇರಿ ದೂರದಲ್ಲಿ ಜಲಾಶಯವನ್ನು ಕಂಡು ಮಹಾರಾಜನನ್ನು ಅಲ್ಲಿಗೆ ಕರೆದುಕೊಂಡು ಹೋದನು ಮಹಾರಾಜನು, ಕುದುರೆಯಿಂದಿಳಿದು ಜಲಪಾನಮಾಡಿ ದಣಿವಾರಿಸಿಕೊಂಡನು. ಸ್ನಾನಮಾಡಿ ಸ್ವಸ್ಥ ಮಾನಸನಾದನು. ಸತ್ವಶೀಲನು,

ಕುದುರೆಗೆ ನೀರು ಕುಡಿಸಿ ಹೊಸ ಚೈತನ್ಯವನ್ನುಂಟುಮಾಡಿದನು.

ಸತ್ವಶೀಲನು, ತಾನೂ ಸ್ನಾನಮಾಡಿದನು, ಶ್ರಮತೀರಿಸಿಕೊಂಡನು. ಮಹಾರಾಜನಿಗೆ ತನ್ನ ಬಟ್ಟೆಯಲ್ಲಿದ್ದ ನೆಲ್ಲಿಕಾಯಿಗಳಲ್ಲಿ ಎರಡನ್ನು ಕೊಟ್ಟನು. ಮಹಾರಾಜನು ಅವನ್ನು ತಿಂದು ನೀರು ಕುಡಿದು ಮಾರ್ಗಾಯಾಸವನ್ನು ಕಳೆದುಕೊಂಡು ನಗರದತ್ತ ಪ್ರಯಾಣಕ್ಕೆ ಸಿದ್ಧನಾದನು. ಚಂಡಸಿಂಹನು ಕುದುರೆಯನ್ನೇರಿದನು. ಸತ್ವಶೀಲನೂ ಕುದುರೆಯ ಹಿಂಭಾಗದಲ್ಲಿ ಕುಳಿತು, ಮಹಾರಾಜನಿಗೆ ನಿಬಿಡಾರಣ್ಯದಲ್ಲಿ ದಾರಿ ತೋರಿಸುತ್ತ ಮುಂದುವರಿದನು. ಸಂಧ್ಯಾವೇಳೆಗೆ ಮಹಾರಾಜನು, ಸತ್ವಶೀಲನೊಂದಿಗೆ ಪಟ್ಟಣವನ್ನು ಸೇರಿದನು. ಮರುದಿನ ರಾಜಸಭೆಯಲ್ಲಿ ಸತ್ವಶೀಲನನ್ನು ಸತ್ಕರಿಸಿದನು.

3) ಸತ್ವಶೀಲನು, ಚಂಡಸಿಂಹನ ದೂತನಾಗಿ ಎಲ್ಲಿಗೆ ಹೋದನು? ದಾರಿಯಲ್ಲಿ ಅವನು ಯಾವ ಆಪತ್ತಿಗೆ ಸಿಲುಕಿದನು ? ಇದರ ಪರಿಣಾಮವೇನಾಯಿತು ? ಚಂಡಸಿಂಹನಿಂದ ಸತ್ಕೃತನಾದ ಸತ್ವಶೀಲನು, ಆತನಿಂದ ಸಿಂಹಳೇಶ್ವರಪುತ್ರಿಯನ್ನು ತನಗೆ ಮದುವೆಮಾಡಿಕೊಡಲು ಕೇಳಿ ಬಾ ಎಂದು ಕಳುಹಿಸಲ್ಪಟ್ಟವನಾಗಿ, ಅನೇಕ ಬ್ರಾಹ್ಮಣಸಮೂಹದಿಂದೊಡಗೂಡಿ, ಹಡಗೇರಿ ಹೊರಟನು. ಸ್ವಲ್ಪ ದೂರ ಸುಖವಾಗಿ ಪ್ರಯಾಣ ನಡೆಯಿತು. ಈ ಮಧ್ಯೆ, ಸಮುದ್ರದ ದಡದ ಸನಿಹದಲ್ಲಿ ಇವರ ಹಡಗು ಸಾಗುತ್ತಿದ್ದಾಗ ಒಂದು ಸ್ವರ್ಣಮಯ ಆನೆ ಕಾಣಬಂದಿತು. ಬಲವಾಗಿ ಗಾಳಿ ಬೀಸಿತು. ಪ್ರಬಲವಾಗಿ ಮಳೆ ಸುರಿಯಿತು. ಹಡಗು ಅಲೆಗಳ ಆಘಾತಕ್ಕೆ ಸಿಲುಕಿ ಓಲಾಡಲಾರಂಭಿಸಿತು. ಈ ಸ್ಥಿತಿಯಲ್ಲೇ ಹಡಗು ಹೋಗುತ್ತಿರುವಾಗ ಸ್ವರ್ಣಗಜವು ಇವರ ಹಡಗಿನ ಧ್ವಜಸ್ತಂಭದ ಮೇಲೆ ಗಾಳಿಯ ರಭಸದಿಂದ ಹಾರಿ ಬಂದು ನಿಂತಿತು. ಹಡಗು ಮುಳುಗುವ ಸ್ಥಿತಿಯುಂಟಾಯಿತು. ಸತ್ವಶೀಲನು, ಧ್ವಜಸ್ತಂಭವನ್ನು ಕತ್ತರಿಸಿದನು. ಹಡಗು ಆನೆಸಹಿತ ಮುಳುಗಿಹೋಯಿತು. ಸತ್ವಶೀಲನು ರಸಾತಳವನ್ನು ತಲುಪಿದನು. ಒಂದು ರತ್ನಮಣಿಮಯಮಂದಿರವನ್ನು ಸೇರಿದನು. ಅಲ್ಲಿಗೆ ತ್ರಿಲೋಕಸುಂದರಿಯೋರ್ವಳು ಮಂದಿರದ ಸ್ತ್ರೀಮೂರ್ತಿಯನ್ನು ಪೂಜಿಸಲು

41

Narayanan

ಬಂದಳು. ಪೂಜೆ ಮುಗಿಸಿ ಹಿಂದಿರುಗಲಾಗಿ, ಸತ್ವಶೀಲನು ಅವಳನ್ನು ಹಿಂಬಾಲಿಸಿ ಹೋದನು. ಅವನು, ಅತ್ಯಂತ ಸುಂದರ ಉದ್ಯಾನಮಂದಿರ ವನ್ನು ಕಂಡನು. ಆ ಸುಂದರಿಯು, ಭವನದಲ್ಲಿ ಹಂಸತೂಲಿಕಾತಲ್ಪದಲ್ಲಿ ಪವಡಿಸಿದ್ದಳು. ಆಕೆಯಲ್ಲಿ ಆಸಕ್ತನಾಗಿ ನಿಂದಿರಲು, ಸತ್ವಶೀಲನಲ್ಲಿಗೆ ಓರ್ವ ದಾಸಿಯು ಬಂದು, 'ಸ್ನಾನಮಾಡಿ ಬಂದು ನಮ್ಮ ಆತಿಥ್ಯವನ್ನು ಸ್ವೀಕರಿಸು' ಎಂದಳು. ಸತ್ವಶೀಲನು, ಸ್ನಾನಾರ್ಥಿಯಾಗಿ ಬಂದು ಬಾವಿ ಯಂತಿರುವ ಸರೋವರಕ್ಕಿಳಿದನು. ಅವನು ಅಲ್ಲಿ ಮುಳುಗಿ, ಚಂಡಸಿಂಹನ ಉದ್ಯಾನದ ಬಾವಿಯಿಂದ ಮೇಲೆದ್ದನು ಹೀಗೆ ಚಂಡಸಿಂಹನಿಂದ ಕಳುಹಿ ಸಲ್ಪಟ್ಟು, ಮತ್ತೆ ಚಂಡಸಿಂಹನಲ್ಲಿಗೆ ಸತ್ವಶೀಲನು ಹಿಂದಿರುಗಿ ತಲುಪಿದನು. ಸುಂದರಿಯ ವಿಯೋಗದುಃಖದಲ್ಲಿ ಸಿಲುಕಿ ನವೆಯಲಾರಂಭಿಸಿದನು.

4) i) ಚಂಡಸಿಂಹನು, ಸತ್ವಶೀಲನ ಉಪಕಾರದಿಂದ ಋಣ-ಮುಕ್ತನಾದ ಬಗೆ ಹೇಗೆ ? ii) ಚಂಡಸಿಂಹನು, ವೀರೋಚಿತ ಉಪಾಯನವನ್ನು ಹೇಗೆ ಕರುಣಿಸಿದನು ?

ಚಂಡಸಿಂಹ ಮಹಾರಾಜನು, ಸತ್ವಶೀಲನಿಂದ ಸಮಸ್ತ ವೃತ್ತಾಂತ ವನ್ನು ಅರಿತು, ತಾನು ಸತ್ವಶೀಲನಿಂದ ಉಪಕೃತನಾದುದನ್ನು ತೀರಿಸಲು ಸದವಕಾಶ ಬಂದೊದಗಿತೆಂದು ಮನದಲ್ಲಿ ಚಿಂತಿಸಿದನು. ಸತ್ವಶೀಲನಿಗೆ, ಚಂಡಸಿಂಹನು, 'ಚಿಂತಿಸಬೇಡ ; ನೀನು ಹೋದ ಮಾರ್ಗದಲ್ಲೇ ನಡೆದು ಆ ಕನ್ಯೆಯನ್ನು ಹುಡುಕಿ ನಿನಗೆ ಮದುವೆ ಮಾಡಿಸುತ್ತೇನೆಂದು ಭರವಸೆ ಯನ್ನು ನೀಡಿದನು ; ಅವನೊಂದಿಗೆ ಹಡಗೇರಿ ಹೊರಟನು. ಮಧ್ಯೆ ದಾರಿಯಲ್ಲಿ ಮತ್ತೆ ಚಿನ್ನದ ಆನೆ ಕಂಡುಬಂದಿತು ; ಅದು ಗಾಳಿ ಮಳೆಯ ಸನ್ನಿವೇಶದಲ್ಲಿ ಹಾರಿ ಬಂದು ಹಡಗಿನ ಧ್ವಜವನ್ನೇರಿತು. ಅದನ್ನು ಕತ್ತರಿಸಿ ಸಮುದ್ರದಲ್ಲಿ ಕೆಡವಿ, ಪೂರ್ವ ನಿಶ್ಚಿತ ಸ್ವರ್ಣಮಂದಿರವನ್ನು ಸೇರಿದನು. ಅಲ್ಲಿ ದೇವೀ ಪೂಜೆಯಲ್ಲಿ ತೊಡಗಿದ್ದು, ಅದು ಮುಗಿದು ಹೊರಟ ದಿವ್ಯಸುಂದರಿಯನ್ನು ಹಿಂಬಾಲಿಸಿ ಹೊರಟು ಉದ್ಯಾನಮಂದಿರ ವನ್ನು ಸೇರಿದನು. ಮಂದಿರದಲ್ಲಿ ಪವಡಿಸಿದ್ದ ಆ ಸುಂದರಿಯೇ ಚಂಡ-ಸಿಂಹನಲ್ಲಿಗೆ ಬಂದು ಆತಿಥ್ಯ ಸ್ವೀಕರಿಸಲು ಕೇಳಿಕೊಂಡಳು. ಸ್ನಾನಮಾಡಿ

ಬರಲು ಕೊಳದ ಬಳಿಗೆ ಹೋಗಿ ಬರಲು ಹೇಳಿದಾಗ, ಚಂಡಸಿಂಹನು ಆಕೆಯು ಕಪಟೋಪಾಯವನ್ನು ಖಂಡಿಸಿದನು. ಆಕೆಯು 'ಅಪಾತ್ರನಲ್ಲಿ ಆ ಕಾರ್ಯ ಅನಿವಾರ್ಯವಾಗಿತ್ತು. ಸತ್ಪಾತ್ರನಲ್ಲಿ ಈ ಕೆಲಸ ಮಾಡಲಾರೆ' ಎಂದಳು. ಅನಂತರ ಆಕೆಯು ತನ್ನ ವೃತ್ತಾಂತವನ್ನರುಹಿದಳು. ತಾನು ಕಾಲನೇಮಿಯ ಮಗಳೆಂದೂ; ತನಗೆ ಎರಡು ಪಟ್ಟಣಸಹಿತನಾದ ಅರಮನೆ ಗಳಿರುವುವೆಂದೂ ಹೇಳಿದಳು ; ಅರಮನೆಗಳನ್ನು ತೋರಿಸಿದಳು. ತನ್ನನ್ನು ತಂದೆಯಾಗಿ ಕಾಪಾಡೆಂದು ಕೇಳಿದಳು.

ಚಂಡಸಿಂಹನು ಮಗಳಂತೆ ಈ ಸುಂದರಿಯನ್ನು ಸ್ವೀಕರಿಸಿ, ಸತ್ವಶೀಲನಿಗೆ ಮದುವೆ ಮಾಡಿಕೊಟ್ಟು, ಪಟ್ಟಣಗಳೆರಡನ್ನೂ ಬಳುವಳಿಯಾಗಿ ಅವನಿಗೆ ಕೊಟ್ಟನು 'ಮಿತ್ರನೆ, ನಿನ್ನ ಎರಡು ನೆಲ್ಲಿಕಾಯಿಗಳ ಉಪಕಾರ ಗಳಲ್ಲಿ ಒಂದನ್ನು ತೀರಿಸಿ ಋಣಮುಕ್ತನಾದೆನೆ'ಂದು ಹೇಳಿದನು.

೨. 'वीरोचितमुपायनम्' ಕಥೆಯ ನೀತಿಯನ್ನು ವಿವರಿಸಿ : ವೀರನಿಗೆ ಸನ್ಮಾನ ದೊರೆತೇ ದೊರೆಯುತ್ತದೆ ; ವೀರನಾದವನಿಗೆ ಅನೇಕ ಕಷ್ಟಗಳನ್ನು ಎದುರಿಸುವ ಸನ್ನಿವೇಶಗಳು ಒದಗುತ್ತವೆ ; ಹೆದರಬಾರದು. ಎಲ್ಲವನ್ನೂ ಎದುರಿಸಿದಲ್ಲಿ ಗೌರವ ದೊರೆಯುತ್ತದೆ. ಚಂಡಸಿಂಹನು, ಸತ್ವಶೀಲನಿಂದ ಉಪಕಾರ ಹೊಂದಿದ್ದನು. ಸತ್ವಶೀಲನು ಜೀವನದಲ್ಲಿ ಬಹು ಕಷ್ಟಪಟ್ಟಿದ್ದನು. ರಾಜನಿಗಾಗಿ ಅನೇಕ ಸಾಹಸದ, ಸೇವೆಯ ಕೆಲಸ ಮಾಡಿ ದ್ದನು. ಈ ಎಲ್ಲವನ್ನೂ ನೆನೆದು ಚಂಡಸಿಂಹನು, ಎರಡು ಪಟ್ಟಣಗಳ ಸಹಿತ, ರಾಜಕುಮಾರಿಯನ್ನು 'ವೀರೋಚಿತ ಉಪಾಯನವಾಗಿ' ಉಪಾ- ಯನವನ್ನು ಸತ್ವಶೀಲನಿಗೆ ಕೊಟ್ಟು ಋಣಮುಕ್ತನಾದನು.

## 3 स्वामिभक्तिः

## [ ಸ್ವಾಮಿಭಕ್ತಿ ]

1. ಕಥೆಯಲ್ಲಿ : ವೀರವರನ ಸ್ವಾಮಿನಿಷ್ಠೆಯು, ಈ ಕಥೆಯಲ್ಲಿ ಅಭಿವ್ಯಕ್ತವಾಗಿದೆ. ಈ ಮಹಾನುಭಾವನು ಶೂದ್ರಕ ಮಹಾರಾಜನ ಅನ್ನ ವನ್ನು ತಿಂದುದಕ್ಕೆ ಅನ್ನದ ಋಣವನ್ನು ತೀರಿಸಲು ಸ್ವಪುತ್ರನನ್ನೇ ಬಲಿ

ಕೊಟ್ಟನು, ದೇವಿಗೆ. ಶೂದ್ರಕಮಹಾರಾಜನು ಅಮಿತವಾಗಿ ಹರ್ಷಿಸಿ, ಆತನ ತ್ಯಾಗವನ್ನು ಮೆಚ್ಚಿ ಆತ್ಮ ಬಲಿದಾನ ಮಾಡಲು ಸಿದ್ಧನಾಗಿ, ಪ್ರತ್ಯಕ್ಷಳಾದ ದೇವಿಯಿಂದ ವೀರವರನ ಪರಿವಾರವನ್ನು ಬದುಕಿಸಿ ತನ್ನ ಭಾಗದ ಕರ್ತವ್ಯವನ್ನು ಮಾಡಿ ಮುಗಿಸಿ ಧನ್ಯನಾದನು.

2. ಕಥೆಯ ಆಕರ :

ಹಿತೋಪದೇಶ : **शीलं परं भूषणम्** —ಅನುಭವದ ನುಡಿ.

'ಹಿತೋಪದೇಶ'–'ಪಂಚತಂತ್ರ' ಮುಂತಾದುವು ಸಂಸ್ಕೃತಭಾಷೆಯ ನೀತಿಕಥಾಸಂಗ್ರಹಗಳು. ಇವು ಪಶುಪಕ್ಷಿಗಳ ಮುಖೇನ ರಾಜನೀತಿ ನೈಪುಣ್ಯ, ಲೋಕವ್ಯವಹಾರ ಮುಂತಾದುವುಗಳನ್ನು ಬೋಧಿಸುತ್ತವೆ. ವಾಲ್ಮೀಕಿ–ವ್ಯಾಸ ವಿರಚಿತ ರಾಮಾಯಣ ಮಹಾಭಾರತಗಳಿಂದ ಹಲವಾರು ಶ್ಲೋಕಗಳನ್ನು ವಿಷಯ ಸಮರ್ಥನೆಗಾಗಿ ಅಲ್ಲಲ್ಲಿ ಬಳಸಿರುವುದು ಕಾಣಬರುತ್ತವೆ. ಈ ಗ್ರಂಥಗಳ ಶೈಲಿ ಮಧುರವಾಗಿದೆ; ಕಥನಕೌಶಲ ಆಕರ್ಷಕವಾಗಿದೆ.

ಪಾಟಲೀಪುತ್ರದ ಸುದರ್ಶನ ರಾಜನ ಮಂದಮತಿಗಳಾದ ಮಕ್ಕಳಿಗೆ ನೀತಿ ಬೋಧನೆಯ ಸಲುವಾಗಿ 'ಹಿತೋಪದೇಶ' ನೀತಿಗ್ರಂಥವನ್ನು ನಾರಾಯಣ ಮಹಾಪಂಡಿತನು ಬರೆದನೆಂದು ಪ್ರತೀತಿಯಿದೆ.

ನಾರಾಯಣಪಂಡಿತನು, ಕ್ರಿ. ಶ. 1347 ರಲ್ಲಿ ಆಳುತ್ತಿದ್ದ ಬಂಗಾಳದ ಧವಳಚಂದ್ರಭೂಪನ ಆಸ್ಥಾನದಲ್ಲಿ ಪಂಡಿತನಾಗಿದ್ದನು. ಈ 'ಹಿತೋಪದೇಶ' ಗ್ರಂಥವು–ಮಿತ್ರಲಾಭ, ಸುಹೃದ್ಭೇದ, ವಿಗ್ರಹ, ಸಂಧಿ— ಎಂಬ ನಾಲ್ಕು ಭಾಗಗಳಲ್ಲಿ ವಿಭಕ್ತವಾಗಿದೆ.

'**स्वामिभक्तः**'— ಎಂಬ ಪಾಠವನ್ನು 'ವಿಗ್ರಹ' ಎಂಬ ಭಾಗದ ಎಂಟನೆಯ ಕಥೆಯಿಂದ ಸಂಗ್ರಹಿಸಿದೆ. ಇದರಲ್ಲಿ ವೀರವರನ ಕರ್ತವ್ಯ ಸುಂದರವಾಗಿ ಚಿತ್ರಿತವಾಗಿದೆ. ಶೂದ್ರಕ ಮಹಾರಾಜನ ಭೃತ್ಯ ಪ್ರೇಮ ಚೇತೋಹಾರಿಯಾಗಿ ಅಭಿವ್ಯಕ್ತವಾಗಿದೆ

3. ವೀರವರನ ಸ್ವಾಮಿನಿಷ್ಠೆ : ತಿಳಿಯಬೇಕಾದ ವಿಷಯ :

i) ಶೂದ್ರಕ ಮಹಾರಾಜನ ರಾಜ್ಯಲಕ್ಷ್ಮಿಯು ವೀರವರನಿಗೆ ಆತನ ಕರ್ತವ್ಯನಿಷ್ಠೆಯನ್ನು ಬೋಧಿಸಿದಾಗ, ಅವನು ರಾಜನಿಗಾಗಿ ಮಾಡಿದ ತ್ಯಾಗ ಬಹುಪಿರಿಯದಾದದ್ದು ii) ಅಲ್ಲದೆ ಮಹಾರಾಜನು ನಡೆದ ವೃತ್ತಾಂತವನ್ನು ಅರಿತಿದ್ದು, ವೀರವರನನ್ನು 'ವಿಷಯವೇನೆಂದು' ಕೇಳಿದಾಗ ತನ್ನ ಕರ್ತವ್ಯವನ್ನು (ತಾನು ಮಾಡಿದ) ವಿವರಿಸದೆ 'ಆಕೆ ಮಾಯ-ವಾದಳು ; ವಿಶೇಷವೇನೂ ಇರಲಿಲ್ಲ' ಎಂಬುದರಲ್ಲಿಯೂ ಆತನ ಸ್ವಾಮಿನಿಷ್ಠೆ ಅಭಿವ್ಯಕ್ತವಾಗಿದೆ. iii) ವೀರವರನಷ್ಟೇ ಸ್ವಾಮಿನಿಷ್ಠೆಯು ಆತನ ಪತ್ನೀಪುತ್ರರಲ್ಲೂ ಇದ್ದಿತು.

4. ಶೂದ್ರಕರಾಜನ ಗುಣಾತಿಶಯಗಳು :

ತಿಳಿಯಬೇಕಾದ ಅಂಶ :

ಶೂದ್ರಕ ಮಹಾರಾಜನು ಉದಾರಿ ; ಕರುಣಿ ; ಯೋಗ್ಯತೆಯುಳ್ಳವರನ್ನು ಗೌರವಿಸುವ ಬುದ್ಧಿಯುಳ್ಳವನು.

ಮಂತ್ರಿಗಳಿಂದ ಪ್ರೇರಿತನಾಗಿ ವೀರವರನನ್ನು ತನ್ನ ಸೇವಾಕಾರ್ಯದಲ್ಲಿ ನಿಯೋಗಿಸಿದನು.

i) ಅಮಾವಾಸ್ಯೆಯ ರಾತ್ರಿಯಲ್ಲಿ ಕೇಳಿಬಂದ ಕರುಣಾಕ್ರಂದನವನ್ನು ಅನುಸರಿಸಲು ಅಪ್ಪಣೆ ಮಾಡಿದನು. 'ಅವನು ಈ ಕಗ್ಗತ್ತಲಲ್ಲಿ ಒಬ್ಬನೇ ಹೋಗುವನೆಂದು' ಕನಿಕರ ತಾಳಿ ತಾನೂ ಛದ್ಮವೇಶದಿಂದ ಅನುಸರಿಸಿ ಹೋದನು.

ii) ದೇವಿಯ ಎದುರಿನಲ್ಲಿ ನಡೆದ ಘಟನೆಯಿಂದ ವ್ಯಥೆಗೊಂಡು ತಾನೂ ಸಾಯಲು ಸಿದ್ಧನಾದನು.

iii) ವೀರವರನನ್ನು ಗೌರವಿಸಿ ಕರ್ಣಾಟಕ ಸಾಮ್ರಾಜ್ಯವನ್ನು ಆತನಿಗೆ ಒಪ್ಪಿಸಿದನು..

5. ಕಠಿಣ ಪದಗಳ ಅರ್ಥ : वर्तनार्थी–ವೇತನ ಭೋಗಿಯಾದ सुनिभृतम्–ಗುಟ್ಟಾಗಿ निरूपित–ಪರೀಕ್ಷಿಸಲ್ಪಟ್ಟಿತು सूचीभेद्ये तमसि–ಬಹು ದಟ್ಟವಾದ ಅಂಧಕಾರದಲ್ಲಿ निःक्षय:–ಖಡ್ಗ ತೀರುವಳಿ सत्वो-

त्कर्ष:-ಅಂತಸತ್ವದ ಅಭಿವೃದ್ಧಿ अकृपण:–ದೈನ್ಯವಿಲ್ಲದ अविकत्थन:–
ಹೊಗಳಿಕೊಳ್ಳದ

6. ಕಥೆ ಹಾಗೂ ಪ್ರಶ್ನೋತ್ತರ :

ಶೂದ್ರಕ ಮಹಾರಾಜನು 'ಶೋಭಾವತೀ' ನಗರದ ಅರಸನಾಗಿದ್ದನು. ಧರ್ಮವತೀ ವೀರವರನ ಪತ್ನಿ ; ಸತ್ವವರ ಮಗ ; ವೀರವತೀ ಮಗಳು ಸಮೇತನಾಗಿ ವೀರವರನೆಂಬ ಬ್ರಾಹ್ಮಣೋತ್ತಮನು, ಯಾವುದೋ ಒಂದು ದೇಶದಿಂದ ಬಂದವನಾಗಿ ರಾಜದ್ವಾರದ ದ್ವಾರಪಾಲಕನನ್ನು ಕುರಿತು ಇಂತು ಹೇಳಿದನು : "ನನಗೆ ರಾಜಸಂದರ್ಶನವನ್ನು ಮಾಡಿಸುವವನಾಗು." ದ್ವಾರಪಾಲಕನು ರಾಜದರ್ಶನ ಮಾಡಿಸಲು ವೀರವರನು ರಾಜನಲ್ಲಿ ಇಂತು ನಿವೇದಿಸಿದನು – "ಪ್ರಭು, ಈ ನನ್ನಿಂದ (ಸೇವಕ) ತಮಗೆ ಪ್ರಯೋಜನವಾಗುವುದಿದ್ದಲ್ಲಿ ನನಗೆ ಸಂಬಳವನ್ನು ನಿಗದಿಮಾಡಿ ನನ್ನನ್ನು ಕೆಲಸಕ್ಕೆ ನೇಮಿಸಿಕೊಳ್ಳಬಹುದು." ರಾಜನು ಹೇಳಿದನು (ಪ್ರಶ್ನಿಸಿದನು) 'ನಿನ್ನಲ್ಲಿ ರಕ್ಷಣಾ ಯೋಗ್ಯವಾದ ಸಾಮಗ್ರಿಗಳೇನಿವೆ ?' ವೀರವರನು ಹೇಳಿದನು : ಈ ಎರಡು ತೋಳುಗಳು ಮತ್ತು ಕತ್ತಿ– ಇಷ್ಟು ಮಾತ್ರ ನನ್ನ ಸಾಮಗ್ರಿಗಳಾಗಿವೆ. ರಾಜನು ಹೇಳಿದನು : 'ಹಾಗಾದಲ್ಲಿ ಸಾಧ್ಯವಿಲ್ಲವು' ಅದನ್ನು ಕೇಳಿ ವೀರವರನು ನಮಸ್ಕರಿಸಿ ಹೊರಟುಹೋದನು. ಆಮೇಲೆ ಮಂತ್ರಿಗಳು ಈ ರೀತಿ ಹೇಳಿದರು : 'ನಾಲ್ಕು ದಿನಗಳ ವೇತನವನ್ನು ನಿರ್ಧರಿಸಿ ಈತನ ಯೋಗ್ಯತೆಯನ್ನು ಪ್ರಭುಗಳು ಪರೀಕ್ಷಿಸಬಹುದಾಗಿದೆ. ಇದರಿಂದ ಇವನು ಸಂಬಳಕ್ಕೆ ಇಟ್ಟುಕೊಳ್ಳಲು ಅರ್ಹನೋ ಅಥವಾ ಅನರ್ಹನೋ ತಿಳಿದುಬರುತ್ತದೆ.' ಅನಂತರ ಮಂತ್ರಿಗಳ ಮಾತು ಕೇಳಿ ರಾಜನು ಕರೆದು ವೀರವರನಿಗೆ ತಾಂಬೂಲಸಹಿತವಾಗಿ ಒಂದುನೂರನಲವತ್ತೆಂಟು ಚಿನ್ನದ ನಾಣ್ಯಗಳನ್ನು ಕೊಟ್ಟನು. ಅಲ್ಲದೆ ಅದನ್ನು ಉಪಯೋಗಿಸುವ ವಿಧಾನವನ್ನೂ ರಾಜನಿಗೆ ಅವನು ಚೆನ್ನಾಗಿ ನಿರೂಪಿಸಿದನು ಅದರಲ್ಲಿ ಅರ್ಧವನ್ನು ವೀರವರನು ದೇವತಾ ಕೈಂಕರ್ಯಕ್ಕೂ ಮತ್ತು ಬ್ರಾಹ್ಮಣರಿಗೂ ಕೊಟ್ಟನು. ಉಳಿದರ್ಧವನ್ನು ದುಃಖದಿಂದ ನರಳುವವರಿಗೆ ಹಂಚಿಕೊಟ್ಟನು. ಇದೆಲ್ಲ ಆದಮೇಲೆ ಉಳಿದಷ್ಟನ್ನು ತನ್ನ ಊಟೋಪಚಾರಗಳಿಗೆ ವಿನಿಯೋಗಿಸಿದನು.

ಪ್ರಶ್ನೆ : ಶೂದ್ರಕನು ಯಾರು ? ಇವನಲ್ಲಿ ಬಂದವನಾರು ? ಅವನ ಪರಿವಾರದಲ್ಲಿ ಯಾರು ಯಾರು ಇದ್ದರು ? ಅವನಿಗೆ ದೊರೆತ ವೇತನವೇನು ? ವೇತನದ ವಿನಿಯೋಗವು ಹೇಗಾಗುತ್ತಿತ್ತು ?

ಕೃಷ್ಣಚತುರ್ದಶಿಯ ರಾತ್ರಿಯಲ್ಲಿ ಶೂದ್ರಕರಾಜನು ಕರುಣಾಕ್ರಂದನವನ್ನು ಕೇಳಿದನು. ಶೂದ್ರಕನು ಈ ರೀತಿ ಹೇಳಿದನು– 'ಅಲ್ಲಿ ಬಾಗಿಲಲ್ಲಿರುವವನಾರು ?' ದ್ವಾರದಲ್ಲಿದ್ದ ದ್ವಾರಪಾಲಕನು ಹೇಳಿದನು– 'ಸ್ವಾಮಿ, ನಾನು ವೀರವರನಿದ್ದೇನೆ' ರಾಜನು ಹೇಳಿದನು – 'ಈ ಕ್ರಂದನವನ್ನನುಸರಿಸುವವನಾಗು.' ವೀರವರನು– 'ಸ್ವಾಮಿಯ ಅಪ್ಪಣೆಯಂತೆ' ಎಂದು ಹೇಳಿ ನಡೆದನು. ರಾಜನು ಈ ರೀತಿ ಯೋಚಿಸಿದನು – 'ಇದು ಸರಿಯಲ್ಲ. ಈ ಒಬ್ಬಂಟಿಕನಾದ ಇವನು ಈ ದಟ್ಟವಾದ ಕತ್ತಲಲ್ಲಿ ಹೋಗಲು ನನ್ನಿಂದ ಪ್ರೇರಿತನಾಗಿದ್ದಾನೆ. ಇವನನ್ನು ಅನುಸರಿಸಿ ಹೋಗಿ ಏನೆಂಬುದನ್ನು ನಾನೂ ನೋಡುತ್ತೇನೆ. ಅನಂತರದಲ್ಲಿ ರಾಜನೂ ಕತ್ತಿಯನ್ನು ಹಿಡಿದು ಅವನನ್ನು ಅನುಸರಿಸುತ್ತ ಪಟ್ಟಣದ ಹೊರಭಾಗಕ್ಕೆ ಹೋದನು ಈ ರೀತಿ ಹೋಗಿದ್ದ ವೀರವರನು ಆ ಅಳುತ್ತಿದ್ದ ರೂಪಯೌವನ ಸಂಪನ್ನೆಯಾದ ಮತ್ತು ಸರ್ವಾಲಂಕಾರಭೂಷಿತಳಾದ ಓರ್ವ ಸ್ತ್ರೀಯನ್ನು ಕಂಡು ಈ ರೀತಿ ಪ್ರಶ್ನಿಸಿದನು. 'ನೀನು ಯಾರು ? ಏಕೆ ಅಳುತ್ತಿರುವೆ ?' ಸ್ತ್ರೀ ಹೀಗೆ ಹೇಳಿದಳು – 'ನಾನು ಈ ಶೂದ್ರಕ ರಾಜನ ರಾಜ್ಯಲಕ್ಷ್ಮಿ. ಬಹುಕಾಲದ ವರೆಗೆ ಈತನ ಭುಜಬಲಗಳ ನೆರಳಿನಲ್ಲಿ ಸುಖವಾಗಿದ್ದೆನು. ಈಗ ಬೇರೆಯ ಕಡೆಗೆ ಹೋಗುತ್ತಿದ್ದೇನೆ.' ವೀರವರನು ಇಂತು ಕೇಳಿದನು– 'ಅಪಾಯವಿದ್ದೆಡೆಯಲ್ಲಿ ಉಪಾಯವೂ ಇದ್ದೇ ಇದೆ. ನೀನು ಇಲ್ಲಿಯೇ ಮತ್ತೆ ವಾಸಮಾಡಲು ಏನು ಮಾಡಬೇಕಾಗುತ್ತದೆ' ಲಕ್ಷ್ಮಿ ಹೀಗೆ ಹೇಳಿದಳು– 'ನೀನು ನಿನ್ನ ಸತ್ವದರನೆಂಬ ಮೂವತ್ತೆರಡು ಲಕ್ಷಣಗಳಿಂದ ಕೂಡಿದ ಮಗನನ್ನು ಭಗವತಿ ಸರ್ವಮಂಗಳೆಗೆ ಬಲಿ ಕೊಡುವುದಾದಲ್ಲಿ ನಾನು ಇಲ್ಲಿ ಮತ್ತೆ ಸುಖವಾಗಿರಲು ಸಾಧ್ಯವಾಗುತ್ತದೆ.' ಹೀಗೆ ಹೇಳಿ ಆಕೆಯು ಅದೃಶ್ಯಳಾದಳು.

ಪ್ರಶ್ನೆ : i) ಕೃಷ್ಣಚತುರ್ದಶಿಯ ರಾತ್ರಿಯಲ್ಲಿ ಶೂದ್ರಕನು ಕೇಳಿ

ದ್ದೇನು ? ಅವನು ದ್ವಾರಪಾಲಕನಿಗೆ ಇತ್ತ ಆದೇಶವೇನು ? ಅನಂತರ ಶೂದ್ರಕನು ಯೋಚಿಸಿದ್ದೇನು ? ii) ವೀರವರನು ಯಾರನ್ನು ಸಂದರ್ಶಿಸಿದನು ? ಅವನು ಕೇಳಿದ್ದೇನು ? ಆಕೆಯು ಕೊಟ್ಟ ಉತ್ತರವೇನು ? iii) ಶೂದ್ರಕನ ರಾಜ್ಯವುಳಿಯಲು ಬಂದ ಸಲಹೆ ಯಾವುದು ?

ವೀರವರನು, ಮನೆಗೆ ಬಂದು ಪತ್ನೀ ಪುತ್ರರಿಗೆ ಅನ್ನದಾತ ಶೂದ್ರಕ ಮಹಾರಾಜನ ರಾಜ್ಯವನ್ನುಳಿಸಲು ದೇವಿಯು ಹೇಳಿದ 'ಪುತ್ರಬಲಿ' ವಿಷಯವನ್ನು ಸವಿಸ್ತಾರವಾಗಿ ಹೇಳಿದನು. ಮಾತುಕೇಳಿ ಹರ್ಷಿತನಾದ ಸತ್ವವರನು, ಈ ರೀತಿ ಹೇಳಿದನು— 'ರಾಜನ ರಾಜ್ಯರಕ್ಷಣಾರ್ಥವಾಗಿ ಪ್ರಾಣತ್ಯಾಗಮಾಡುವ ಸೌಭಾಗ್ಯ ದೊರೆತ ನಾನೇ ಧನ್ಯನು ತಂದೆ, ತಡವೇಕೆಮಾಡಬೇಕು ? ಇಂಥ ಸದ್ವಿನಿಯೋಗವಾಗುವ ದೇಹವುಳ್ಳವನು ನಿಜಕ್ಕೂ ಭಾಗ್ಯವಂತನೇ ಸರಿ. ಏಕೆಂದರೆ : "ಪಣಗಳನ್ನೂ ಪ್ರಾಣವನ್ನೂ ಪರೋಪಕಾರಕ್ಕಾಗಿ ಜ್ಞಾನಿಗಳು ತ್ಯಾಗಮಾಡುತ್ತಾರೆ ಹುಟ್ಟಿದವನಿಗೆ ನಾಶವು ಸ್ಥಿರವಾಗಿರುವಾಗ ಇಂಥ ಕಾರ್ಯಕ್ಕೆ ಮಾಡುವ ತ್ಯಾಗವು ಶ್ರೇಷ್ಠವೇ ಆಗುತ್ತದೆ."

ಸತ್ವವರನ ತಾಯಿಯೂ ಹೀಗೆ ಹೇಳಿದಳು— 'ಈ ಕಾರ್ಯವನ್ನೇ ಮಾಡಲಾಗದ ಮೇಲೆ ಸಂಬಳದ ಋಣವನ್ನು ತೀರಿಸಲು ಮತ್ತಾವ ಮಹಾಕಾರ್ಯವನ್ನು ತಾನೆ ಮಾಡಲು ಸಾಧ್ಯವಾದೀತು !' ಹೀಗೆ ಯೋಚಿಸಿ ಎಲ್ಲರೂ ಸರ್ವಮಂಗಳೆಯ ದೇವಾಲಯಕ್ಕೆ ಬಂದರು. ಅಲ್ಲಿ ಸರ್ವಮಂಗಳೆಯನ್ನು ಪೂಜಿಸಿ ವೀರವರನು ಹೀಗೆ ಹೇಳಿದನು— 'ದೇವಿ ಪ್ರಸನ್ನಳಾಗು. ಶೂದ್ರಕ ಮಹಾರಾಜನು ಜಯಶಾಲಿಯಾಗಲಿ. ಈ ಬಲಿಯನ್ನು ಸ್ವೀಕರಿಸು.' ಹೀಗೆ ಹೇಳಿ ಮಗನ ತಲೆಯನ್ನು ಕತ್ತರಿಸಿಹಾಕಿದನು. ಸಹೋದರನನ್ನು ಕಳೆದುಕೊಂಡ ವೀರವತಿಯೂ ತಲೆ ಚಚ್ಚಿಕೊಂಡು ಸತ್ತಳು. ವೀರವರನ ಪತ್ನಿ ಧರ್ಮವತಿಯೂ ಸಾಯುವೆನೆಂದು ಹೇಳಿದಳು ವೀರವರನು ಚಿತೆಯನ್ನು ಸಿದ್ಧಪಡಿಸಿದನು. ಆಕೆ ಚಿತೆಯಲ್ಲಿ ಹಾರಿ ಪ್ರಾಣಬಿಟ್ಟಳು. ಅನಂತರ ವೀರವರನು ಹೀಗೆ ಯೋಚಿಸಿದನು— 'ರಾಜನ ಸಂಬಳದ ಋಣವನ್ನು ತೀರಿಸಿದ್ದಾಯಿತು. ಮಗನಿಲ್ಲದವನ ಈ ನನ್ನ

ಜೀವನ ವ್ಯರ್ಥವೇ ಸರಿ.' ಈ ರೀತಿ ಯೋಚಿಸಿ ತನ್ನ ತಲೆಯನ್ನೂ ಕತ್ತರಿಸಿಕೊಂಡನು.

ಪ್ರಶ್ನೆ : 1) ದೇವೀವಚನದಂತೆ ನಡೆಯಲು ವೀರವರನು ಏನು ಮಾಡಿದನು ? 2) ಸತ್ತ್ವವರನು ಹೇಳಿದುದೇನು ? 3) ವೀರವರನ ಪರಿವಾರದ ಆತ್ಮಬಲಿದಾನ ಹೇಗೆ ನಡೆಯಿತು ?

ಈ ವೀರವರನ ಪರಿವಾರದ ಆತ್ಮ ಬಲಿದಾನವನ್ನು ಕಣ್ಣಾರೆ ಕಂಡ ಶೂದ್ರಕನು ಹೀಗೆ ಯೋಚಿಸಿದನು : "ಇಂಥ ತ್ಯಾಗಮಾಡುವ ವ್ಯಕ್ತಿಗಳು (ವೀರವರ ಮತ್ತು ಆತನ ಕುಟುಂಬದವರಂತಹ) ಹಿಂದೆ ಇರಲಿಲ್ಲ–ಮುಂದೆ ಅವತರಿಸುವರೋ ಇಲ್ಲವೋ ಹೇಳಲಾಗುವುದಿಲ್ಲ. ಇಂಥವರಿಲ್ಲದ ನನ್ನ ರಾಜ್ಯ ಅಪ್ರಯೋಜಕವೇ ಸರಿ." ಈ ರೀತಿ ಯೋಚಿಸಿ ರಾಜನು ತನ್ನ ತಲೆಯನ್ನೂ ಕತ್ತರಿಸಿಕೊಳ್ಳಲು ಕತ್ತಿಯನ್ನೆತ್ತಿದನು.

ಆಗ ಭಗವತಿ ಸರ್ವಮಂಗಳೆಯು ಪ್ರತ್ಯಕ್ಷಳಾಗಿ ನಿಂತು ರಾಜನ ಕೈ ಹಿಡಿದು ಈ ರೀತಿ ಹೇಳಿದಳು– "ಮಗು, ನಿನಗೆ ನಾನು ಪ್ರತ್ಯಕ್ಷಳಾಗಿದ್ದೇನೆ ಈ ಪ್ರಯತ್ನವನ್ನು ಸಾಕುಮಾಡು. ನಿನ್ನ ಜೀವನಪರ್ಯಂತವೂ ರಾಜ್ಯ ಭಂಗವುಂಟಾಗುವುದಿಲ್ಲವು." ರಾಜನು ದೇವಿಗೆ ಸಾಷ್ಟಾಂಗ ಪ್ರಣಾಮಗಳನ್ನು ಮಾಡಿ ಈ ರೀತಿ ಹೇಳಿದನು– "ದೇವಿ, ನನಗೆ ಈ ರಾಜ್ಯದಿಂದೇನು ಪ್ರಯೋಜನ ? ನಾನು ಬದುಕುವುದರಿಂದೇನಾಗುವುದು ? ನೀನು ನನಗೆ ಪ್ರಸನ್ನಳಾಗಿದ್ದಲ್ಲಿ ಈ ವೀರವರನು ಪತ್ನಿಪುತ್ರಸಮೇತನಾಗಿ ನನ್ನ ಆಯುಃಪ್ರಮಾಣದ ಬಲದಿಂದಾಗಿ ಬದುಕಲಿ. ಹಾಗಿಲ್ಲದ ಪಕ್ಷದಲ್ಲಿ ನಾನು ಬದುಕಲಪೇಕ್ಷಿಸುವುದಿಲ್ಲ."

ಭಗವತಿಯು ಹೀಗೆ ಹೇಳಿದಳು– 'ಮಗು, ನಿನ್ನ ಸರ್ವತೋಮುಖವಾದ ಉನ್ನತಿಯ ದೃಷ್ಟಿಯಿಂದ ನಿನಗಿರುವ ಈ ಭೃತ್ಯವಾತ್ಸಲ್ಯದಿಂದಾಗಿ ನಾನು ಸಂತುಷ್ಟಳಾಗಿದ್ದೇನೆ. ನೀನು ವಿಜಯಶಾಲಿಯಾಗಿ ಹೋಗು. ಈ ರಾಜಪುತ್ರನೂ ಪತ್ನೀಪುತ್ರಸಮೇತನಾಗಿ ಬದುಕಲಿ.' ಹೀಗೆ ಹೇಳಿ ದೇವಿ ಅದೃಶ್ಯಳಾದಳು. ವೀರವರನೂ ಪತ್ನೀಪುತ್ರಸಮೇತನಾಗಿ ಬದುಕಿ ತನ್ನ ಮನೆಗೆ ತೆರಳಿದನು. ರಾಜನೂ ಅವರಿಗೆ ಕಾಣದವ

ನಾಗಿ ಬೇಗನೆ ತನ್ನ ಅರಮನೆಗೆ ಹಿಂದಿರುಗಿ ಬಂದು ನಿದ್ರಿಸಿದನು.

ಪ್ರಶ್ನೆ : ವೀರವರನ ಪರಿವಾರದ ಆತ್ಮ ಬಲಿದಾನವನ್ನು ಕಂಡ ಶೂದ್ರಕನು ಏನು ಯೋಚಿಸಿದನು ? ಏನು ಮಾಡಲು ಉದ್ಯುಕ್ತನಾದ ನು ? ಆಗ ನಡೆದುದೇನು ? ಪರಿಣಾಮವೇನಾಯಿತು ?

ದ್ವಾರಸ್ಥನಾದ ವೀರವರನು ರಾಜನು ಪ್ರಶ್ನಿಸಲಾಗಿ ಹೀಗೆ ನುಡಿದನು– 'ಸ್ವಾಮಿಯೆ, ಆ ಅಳುತ್ತಿದ್ದ ಸ್ತ್ರೀ ನನ್ನನ್ನು ನೋಡಿ ಅದೃಶ್ಯಳಾಗಿ ಹೋದಳು, ಇನ್ನೇನೂ ಸಮಾಚಾರವು ಇಲ್ಲವು.' ಈ ಮಾತನ್ನು ಕೇಳಿದ ರಾಜನು ಆಶ್ಚರ್ಯಚಕಿತನಾಗಿ ಇಂತು ಯೋಚಿಸಿದನು.

" ಇವನು ಯಾವ ಸ್ವಾರ್ಥವೂ ಇಲ್ಲದೆ ಸತ್ಯವನ್ನು ನುಡಿದಿದ್ದಾನೆ ; ನಿರ್ವಂಚನೆಯು ಶೂರನಾಗಿದ್ದಾನೆ ; ಅಪಾತ್ರನಲ್ಲಿ ದಾನಮಾಡದವನು ಆಗಿದ್ದಾನೆ ; ಮನಸ್ಸಿಗೆ ನೋವಾಗದ ಮಾತುಗಳುಳ್ಳ ಪಂಡಿತನಾಗಿದ್ದಾನೆ."

ಈ ಬಗೆಯ ಮಹಾಪುರುಷ ಲಕ್ಷಣಗಳು ಈತನಲ್ಲಿವೆ. ಅನಂತರದಲ್ಲಿ ರಾಜನು ಪ್ರಾತಃಕಾಲದಲ್ಲಿ ಒಂದು ಶಿಷ್ಟಸಭೆಯನ್ನು ಕರೆದು (ಕೂಡಿಸಿ) ಸಕಲ ವೃತ್ತಾಂತವನ್ನೂ ವಿವರಿಸಿ ಆತನನ್ನು ಹೊಗಳಿ ಕರ್ಣಾಟಕ ರಾಜ್ಯಾಧಿಕಾರವನ್ನು ಆತನಿಗೆ ದಯಪಾಲಿಸಿದನು.

ಪ್ರಶ್ನೆ : 1) ಶೂದ್ರಕನು ವೀರವರನನ್ನು ಏನೆಂದು ಪ್ರಶ್ನಿಸಿದನು ? 2) ವೀರವರನು ಕೊಟ್ಟ ಉತ್ತರವೇನು ? 3) ಪರಿಣಾಮವೇನಾಯಿತು ?

## 4 करुणालयो जीमूतवाहनः

### [ ಕರುಣಾಳುವಾದ ಜೀಮೂತವಾಹನನು ]

1. ಕಥೆಯಲ್ಲಿ :

**' परोपकारार्थं सतां विभूतयः '**

ಎಂದು ಹೇಳಲಾಗಿದೆ. ವಿದ್ಯಾಧರ ಚಕ್ರವರ್ತಿ ಜೀಮೂತಕೇತು ಪುತ್ರ ಜೀಮೂತವಾಹನ ಎಂಬುವನು, ತನ್ನ ಶರೀರವನ್ನು ಗರುಡನಿಗೆ

ಆಹಾರವಾಗಿ ಅರ್ಪಿಸಿ, ಪನ್ನಗಕುಮಾರ ಶಂಖಚೂಡನನ್ನು ಸಂರಕ್ಷಿಸುವು ದರ ಜತೆಗೆ ಸಮಸ್ತ ಸರ್ಪಕುಲವನ್ನೇ ಕರುಣೆಯಿಂದ ಕಾಪಾಡಿದ ಮಹಾ ನುಭಾವ ಮಲಯವತಿ ಈತನ ಪತ್ನಿ. ಈತನ ತ್ಯಾಗ- ಶಿಬಿ, ದಧೀಚಿ, ಹರಿಶ್ಚಂದ್ರರ ತ್ಯಾಗಕ್ಕೆ ಸಮಾನವಾದುದು. ಇವನ ಕೀರ್ತಿ ಅಜರಾಮರ

2. ಕಥೆಯ ಆಕರ : [ ವೇ ಸರಿ.

ಸೂ : 'वीरोचितमुपायनम्' ಪಾಠದ ಆಕರ ಪರಿಚಯು ವನ್ನು ನೋಡಿರಿ. ಈ ಕಥೆಯನ್ನು ಬೇತಾಳ ಪಂಚವಿಂಶತಿಯಿಂದ ಆರಿಸಲಾಗಿದೆ.

3. ಕಥೆಯ ಪಾತ್ರಪರಿಚಯ :

ಕ) ಹಿಮವಂತ : ಪರ್ವತರಾಜ. ಇವನ ತಪ್ಪಲಿನ ಪ್ರದೇಶದಲ್ಲಿ ಕಾಂಚನಪುರವಿದೆ ಇಲ್ಲಿಯೇ ವಿದ್ಯಾಧರ ಚಕ್ರವರ್ತಿ ಜೀಮೂತವಾಹನನ ತಂದೆ ಜೀಮೂತಕೇತುವು ವಾಸಿಸುತ್ತಿದ್ದನು. ಇವನ ಉದ್ಯಾನದಲ್ಲೇ ಕಲ್ಪವೃಕ್ಷವಿತ್ತು. ಈ ಕಲ್ಪವೃಕ್ಷವನ್ನು ಸೇವಿಸಿ ಜೀಮೂತವಾಹನನನ್ನು ಪಡೆದನು, ಜೀಮೂತಕೇತು ಮುಂದೆ ಜೀಮೂತವಾಹನನೂ ಈ ಕಲ್ಪವೃಕ್ಷವನ್ನು ಆರಾಧಿಸಿ ಧನ್ಯನಾದನು.

ಖ) ಜೀಮೂತವಾಹನ : (ಸೂ : ಕಥೆಯಲ್ಲಿ ನೋಡಿ)

ಗ) ವಿಶ್ವಾವಸು : ಮಲಯಾಚಲ ಪರ್ವತನಿವಾಸಿ ಸಿದ್ಧರಾಜ ಪುತ್ರ ಜೀಮೂತವಾಹನನ ಮಿತ್ರ; ಮಲಯವತಿಯ ಅಣ್ಣ. ಜೀಮೂತ ವಾಹನನ ಭಾವ.

ಘ) ಮಲಯವತಿ : ಸಿದ್ಧರಾಜನ ಮಗಳು ; ಜೀಮೂತವಾಹ ನನ ಹೆಂಡತಿ. ಗೌರೀ ದೇವಿಯ ಭಕ್ತಳು.

ಙ) ಜೀಮೂತಕೇತು : ವಿದ್ಯಾಧರ ಚಕ್ರವರ್ತಿ ; ಕಾಂಚನಪುರದ ಅರಸು ; ಜೀಮೂತವಾಹನನ ತಂದೆ ; ಮಲಯವತಿಯ ಮಾವ.

ಚ) ವೈನತೇಯ : ಗರುಡ ; ಪಕ್ಷಿರಾಜ ; ಪನ್ನಗಶತ್ರು ; ಜೀಮೂತವಾಹನನು ಇವನ ಆಹಾರವಾದನು.

ಫ) ಶಂಖಚೂಡ : ಗರುಡನಿಗೆ ಆಹಾರವಾಗಿ ಬಂದಿದ್ದನು ; ಗೋಕರ್ಣೇಶ್ವರನ ಭಕ್ತನು ; ಈತನ ಮೇಲೆ ಜೀಮೂತವಾಹನನು ಕರುಣೆ ತೋರಿದನು. ಈತನಿಂದ ಸಮಸ್ತ ಸರ್ಪಕುಲದ ಸಂರಕ್ಷಣೆಯಾಯಿತು.

ii) ಕಠಿಣ ಪದಗಳ ಅರ್ಥ : नगेन्द्र–ಪರ್ವತರಾಜ अग्रणी–ಮುಂದಾಳು अभ्यनुज्ञात:–ಹೊಂದಿದ ಅನುಮತಿಯುಳ್ಳವನು भद्र–ಮಂಗಳಕರನೆ कल्पपादप–ಕಲ್ಪವೃಕ್ಷ एकदा–ಒಂದು ದಿನ पुष्पाणि चिन्वती – ಹೂ ಕೊಯ್ಯುತ್ತಿರುವ त्वन्मुखचन्द्रे गते–ನಿನ್ನ ಚಂದ್ರ-ಸದೃಶ ಮುಖಚಂದ್ರನು ಹೋದ ಮೇಲೆ प्रहृष्यति–ಸಂತೋಷಪಡುತ್ತಾನೆ

4. ಕಥೆಯ ಪ್ರಶ್ನೋತ್ತರ :

1) ಕಾಂಚನಪುರವೆಲ್ಲಿದೆ ? ಅಲ್ಲಿಯ ನಿವಾಸಿ ಯಾರು ? ಈತನ ಉದ್ಯಾನವಲ್ಲೇನಿತ್ತು ? ಇದರ ಪ್ರಯೋಜನವೇನಾಯಿತು ?

(ಸೂ : 'ಹಿಮವಂತ' ಪಾತ್ರಪರಿಚಯ ನೋಡಿ)

2) ಮಲಯವತಿ ಯಾರು ? ಈಕೆ ಜೀಮೂತವಾಹನನನ್ನು ಎಲ್ಲಿ ಗಾಂಧರ್ವ ವಿಧಿಯಿಂದ ಮದುವೆಯಾದಳು ? ಈ ಸಂದರ್ಭದಲ್ಲಿ ಸಾಕ್ಷೀಭೂತರಾಗಿ ಯಾರಿದ್ದರು ? ಮುಂದೆ ಈಕೆ ಆತ್ಮತ್ಯಾಗ ಮಾಡಲು ಏಕೆ ಸಿದ್ಧಳಾದಳು ? ಈಕೆಗೆ 'ಮನೋರಥ ಪ್ರಾಪ್ತಿಯಾಗುವುದೆಂದು' ಅಭಯವಿತ್ತವರಾರು ?

ಮಲಯವತಿ, ಸಿದ್ಧರಾಜನ ಮಗಳು. ಮಲಯಾಚಲ ಪರ್ವತ ನಿವಾಸಿ ವಿಶ್ವಾವಸುವಿನ ಮೈತ್ರಿಯು ಜೀಮೂತವಾಹನನಿಗೆ ದೊರೆಯಿತು. ಮಲಯವತಿ ಗೌರೀ ಭಕ್ತಳಾಗಿದ್ದಳು. ಗೌರೀ ಪೂಜೆಗೆ ಬಂದಿದ್ದಾಗ ಈಕೆಗೆ ಜೀಮೂತವಾಹನನ ಪರಿಚಯವಾಯಿತು. ಈರ್ವರೂ, ಮಲಯವತಿ ಸಹೋದರ ವಿಶ್ವಾವಸು, ಚೇಟಿಯ ಸಾಕ್ಷ್ಯತ್ವದಲ್ಲಿ ಗಾಂಧರ್ವವಿಧಿಯಿಂದ ವಿವಾಹವಾದರು. ಬಹುಕಾಲದ ವಿಯೋಗದುಃಖದಲ್ಲಿ ತಪ್ತಳಾದ ಮಲಯವತಿ ಪ್ರಾಣತ್ಯಾಗಕ್ಕೆ ಸಿದ್ಧಳಾದಾಗ ವಿದ್ಯಾಧರಕುಲ ದೇವಿ ಗೌರಿಯು 'ಆಶೀರ್ವಾದ' ಮಾಡಿ ಬದುಕಿಸಿದಳು. ಮುಂದೆ ಜೀಮೂತ

ವಾಹನನು, ಮಲಯವತಿಯನ್ನು ಶಾಸ್ತ್ರವಿಧಿಯಿಂದ ವಿವಾಹಿತನಾಗಿ ಸುಖಿಸಿದನು.

3) ಜೀಮೂತವಾಹನನು ವಿಶ್ವಾವಸುವಿನೊಂದಿಗೆ ಎಲ್ಲಿ ಸಂಚರಿಸಲು ಹೋದನು ? ಅಲ್ಲಿ ಅವನು ಕಂಡದ್ದೇನು ?

ಸಿದ್ಧರಾಜಪುತ್ರಿ ಮಲಯವತಿಯ ವಿವಾಹಾನಂತರದಲ್ಲಿ, ಭಾವ ವಿಶ್ವಾವಸುವಿನ ಸಂಗಡ ಸುತ್ತಾಡುತ್ತ, ದಕ್ಷಿಣ ಸಮುದ್ರತೀರಕ್ಕೆ ಬಂದನು ಅಲ್ಲಿ ಸುತ್ತುತ್ತಿರುವಾಗ, ಒಂದು ಸ್ಥಾನದಲ್ಲಿ ಅಪಾರವಾದ ಎಲುಬಿನ ರಾಶಿಯನ್ನು ಕಂಡು 'ಇದೇನೆಂದು' ಕೇಳಿದನು. ಅನಂತರ ವಿಶ್ವಾವಸುವು ಜೀಮೂತವಾಹನನಿಗೆ, ಆ ಅಸ್ಥಿಪಂಜರದ ಕಥೆಯನ್ನು ವಿವರಿಸಿದನು.

4) ಅಸ್ಥಿಪಂಜರಗಳ ರಾಶಿಯ ವಿವರಣೆ ಏನು? ಇದನ್ನು ನೋಡಿದ ಜೀಮೂತವಾಹನನ ತೀರ್ಮಾನವೇನು ? ಪರಿಣಾಮವೇನಾಯಿತು ?

ದಕ್ಷಿಣ ಸಮುದ್ರತೀರದಲ್ಲಿ, ಮಿತ್ರ ಹಾಗೂ ಭಾವ ವಿಶ್ವಾವಸುವಿನೊಡನೆ ವಿಹರಿಸುತ್ತಿದ್ದ ಕರುಣಾಳು ಜೀಮೂತವಾಹನನು, ಒಂದೆಡೆಯಲ್ಲಿ ಎಲುಬುಗಳ ರಾಶಿಯನ್ನು ಕಂಡು, 'ಇದೇನೆಂದು ?' ಕೇಳಿದನು. ವಿಶ್ವಾವಸು ಹೀಗೆ ಹೇಳಿದನು : "ನಾಗಮಾತೆಯಾದ 'ಕದ್ರು' ಎಂಬುವಳು ಪಕ್ಷಿರಾಜನಾದ ಗರುಡನ ತಾಯಿ ಸವತಿಯಾದ 'ವಿನತೆ'ಯನ್ನು ಕಪಟೋಪಾಯದಿಂದ ಪೀಡಿಸುತ್ತಿದ್ದಳು. ಗರುಡನು, ತನ್ನ ತಾಯಿಯನ್ನು ದಾಸ್ಯದಿಂದ ಬಿಡುಗಡೆ ಮಾಡಿದನು. ಕದ್ರುವಿನ ಮೇಲಣ ಕೋಪದಿಂದ ಸಮಸ್ತ ಸರ್ಪಕುಲವನ್ನೇ ನಾಶಮಾಡತೊಡಗಿದನು. ಈ ಸರ್ಪಕುಲದ ನಾಶವು ಅನಿರೀಕ್ಷಿತವಾಗಿ, ಅಸಂಖ್ಯವಾಗಿ ಏಕಕಾಲದಲ್ಲಿ ನಡೆಯುವುದನ್ನು ತಪ್ಪಿಸಲು, ಪ್ರತಿದಿನವೂ ಒಬ್ಬೊಬ್ಬ ನಾಗನನ್ನು ಆಹಾರಾರ್ಥವಾಗಿ ಕಳುಹಿಸುವ ಒಡಂಬಡಿಕೆಯನ್ನು ಸರ್ಪರಾಜನಾದ ವಾಸುಕಿಯು ಗರುಡನೊಂದಿಗೆ ಮಾಡಿಕೊಂಡಿರುವನು. ಅನಂತಕಾಲದಿಂದ ಈ ಸರ್ಪನಾಶವಾಗುತ್ತ ಬಂದು, ಇಲ್ಲಿ ಈ ದೊಡ್ಡ ಎಲುಬಿನ ರಾಶಿಯುಂಟಾಗಿದೆ." ಈ ಮಾತನ್ನು ಕೇಳಿದ ಜೀಮೂತವಾಹನನಿಗೆ ಅಪಾರ ವ್ಯಥೆಯುಂಟಾಯಿತು.

ಗರುಡನು ಮಾಡುತ್ತಿರುವ ಪಾಪಕಾರ್ಯಕ್ಕೆ ಪ್ರೋತ್ಸಾಹಿಸಿದ ಸರ್ಪರಾಜನ ಸ್ವಾರ್ಥವನ್ನು ನೆನೆದನು ಈ ಸರ್ಪನಾಶವನ್ನು ನಿಲ್ಲಿಸುತ್ತೇನೆಂದು ಸಂಕಲ್ಪಿಸಿದನು.

5) ಜೀಮೂತವಾಹನನು ಕೇಳಿದ ಆರ್ತನಾದವಾವುದು? ಅವನು ನೀಡಿದ ಸಮಾಧಾನವೇನು? ಇದರ ಪರಿಣಾಮವೇನಾಯಿತು?

ಪಕ್ಷಿರಾಜ ಗರುಡನಿಗೆ ಆಹಾರವಾಗಿ ಸರ್ಪರಾಜ ವಾಸುಕಿಯಿಂದ ಪ್ರೇಷಿತನಾಗಿ ಬಂದ ಶಂಖಚೂಡನ ವಿಯೋಗವನ್ನು ಸಹಿಸಲಾರದೆ ಈತನ ತಾಯಿಯು, ವ್ಯಥೆಯಿಂದ 'ಮಗುವೆ, ನೀನು ಗರುಡನ ಆಹಾರಕ್ಕಾಗಿ ವಾಸುಕಿಯಿಂದ ನಿಯುಕ್ತನಾಗಿರುವೆ. ನಿನ್ನ ವಿಯೋಗದುಃಖವನ್ನು ನಾನೂ ನಿನ್ನ ತಂದೆಯೂ ಹೇಗೆ ಸಹಿಸುವುದು? ನಮ್ಮ ಗತಿಯೇನು?' ಎಂದು ಗಟ್ಟಿಯಾಗಿ ಅಳುತ್ತಿದ್ದಳು. ಈ ಅಳುವಿನ ಕೂಗನ್ನು ಕೇಳಿದ ಕರುಣಾಳುವಾದ ಜೀಮೂತವಾಹನನು, ಕೇಳಿದನು ಅವನು, ಶಂಖಚೂಡನ ತಾಯಿಗೆ ಭರವಸೆಯಿತ್ತನು: 'ನನ್ನ ಪ್ರಾಣವನ್ನು ತೆತ್ತಾದರೂ ನಿಮ್ಮನ್ನು ಕಾಪಾಡುತ್ತೇನೆ, ಹೆದರಬೇಡಿರಿ.' ಶಂಖಚೂಡನೂ ತಾಯಿಯೂ 'ನೀನು ನಮಗಾಗಿ ಸಾಯಬಾರದೆಂದು' ಬೇಡಿದರು. ಶಂಖಚೂಡನು ಗರುಡನಿಗೆ ಆಹಾರವಾಗುವ ಪೂರ್ವದಲ್ಲಿ ಗೋಕರ್ಣೇಶ್ವರನನ್ನು ಪ್ರಾರ್ಥಿಸಿ ಬರಲು ಹೋದನು. ಇಷ್ಟರಲ್ಲಿ ಗರುಡನ ಆಗಮನದ ಸೂಚನೆಯು ಜೀಮೂತವಾಹನನಿಗೆ ತಿಳಿಯಿತು. ಈತನು 'ಆತ್ಮಾರ್ಪಣ ಮಾಡಲು' ಸಿದ್ಧನಾದನು.

6) ಗರುಡನು ಯಾರನ್ನು ಆಹಾರಾರ್ಥವಾಗಿ ಸ್ವೀಕರಿಸಿದನು? ಅವನಿಗೆ ಏಕೆ ಆಶ್ಚರ್ಯವಾಯಿತು? ಗರುಡನು ಕೇಳಿದ್ದೇನು? ದೊರೆತ ಉತ್ತರವೇನು? ಪರಿಣಾಮವೇನಾಯಿತು?

ನಾಗ ಶಂಖಚೂಡನು, ಗೋಕರ್ಣೇಶ್ವರನ ದರ್ಶನಕ್ಕೆ ಹೋಗಿದ್ದನು ಜೀಮೂತವಾಹನನು, ಶಂಖಚೂಡನ ತಾಯಿಗೆ ಸಮಾಧಾನವನ್ನು ಹೇಳುತ್ತಿದ್ದನು. ಆಗಲೇ ಗರುಡನು ಬಂದನು. ಜೀಮೂತವಾಹನನು ವಧ್ಯಶಿಲೆ

ಯುಸ್ಸೇರಿದನು. ಗರುಡನು, ಜೀಮೂತವಾಹನನನ್ನು ಕಚ್ಚಿಕೊಂಡು ಪರ್ವತಾಗ್ರಕ್ಕೆ ಹೋಗಿ ತಿನ್ನಲಾರಂಭಿಸಿದನು. ಗರುಡನು ಸಾಯಲು ಹೆದರದೆ ಧೈರ್ಯದಿಂದಿರುವ ಜೀಮೂತವಾಹನನನ್ನು 'ನೀನಾರೋ ಮಹಾತ್ಮನಿರಬೇಕು ; ನಾಗನಲ್ಲ. ನಿಜವನ್ನು ಹೇಳೆಂದು' ಪ್ರಾರ್ಥಿಸಿದನು ಜೀಮೂತವಾಹನನು ತನ್ನ ಪರಿಚಯವನ್ನು ಹೇಳಿ 'ನಾಗಸಂಹಾರವನ್ನು ನಿಲ್ಲಿಸೆಂದು' ಹೇಳಿದನು. ಗರುಡನು ತಥಾಸ್ತು ಎಂದನು.

ಇಷ್ಟರಲ್ಲಿ, ಜೀಮೂತವಾಹನನ ರಕ್ತಸಿಕ್ತವಾದ ಶಿರೋರತ್ನವು ಮಲಯವತಿ, ಜೀಮೂತಕೇತುಗಳಿಗೆ ದೊರೆತು, ವಿದ್ಯಾಧರ ವಿದ್ಯೆಯಿಂದ ವಿಷಯವರಿತು ನಾಗವಧಾಸ್ಥಾನಕ್ಕೆ ಬಂದರು. ಶಂಖಚೂಡನೂ ಬಂದು ಗರುಡನನ್ನು ಬೇಡಿದನು : 'ನಾನು ನಿನ್ನ ಆಹಾರವು. ಈ ಮಹಾನುಭಾವನನ್ನು ಬಿಟ್ಟುಬಿಡು.' ಮಲಯವತಿಯು ಗೌರಿಯನ್ನು 'ನಿನ್ನ ಮಾತನ್ನು ಉಳಿಸಿಕೋ' ಎಂದು ಅರ್ಚಿಸಿದಳು ಗೌರಿದೇವಿಯು ಆಶೀರ್ವದಿಸಿದಳು. ಅಮೃತ ಸೇಚನದಿಂದ ಸಮಸ್ತ ನಾಗರನ್ನು ಉಳಿಸಿದಳು. ಎಲ್ಲರಿಗೂ ಮಂಗಳ ಉಂಟಾಯಿತು.

## 5 कर्णार्जुनसङ्ग्रामः

## [ ಕರ್ಣಾರ್ಜುನರ ಯುದ್ಧ ]

1 ಕಥೆಯಲ್ಲಿ :

ಶ್ರೀಕೃಷ್ಣನ ಪ್ರಜ್ಞಾವಂತಿಕೆ, ಕಾರ್ಯಚಾತುರ್ಯ, ಸಮಯೋಚಿತ ಬುದ್ಧಿ, ಕಾರ್ಯದಕ್ಷತೆ, ಧರ್ಮಾಧರ್ಮ ವಿವೇಚನೆ, ಆರ್ತರಕ್ಷಣೆಗಳನ್ನು ಕಾಣಬಹುದು.

2. ಕಥೆಯ ಆಕರ :

ಮಹಾಭಾರತದ ಆಧಾರದ ಮೇಲೆ ಪಂಡಿತ ಲಕ್ಷ್ಮಣಸೂರಿ ವಿರಚಿತ 'ಮಹಾಭಾರತ ಸಂಗ್ರಹಃ' ಗ್ರಂಥದಿಂದ ಈ ಭಾಗವನ್ನು ಆರಿಸಲಾಗಿದೆ.

ಪರಿಚಯ : ಲಕ್ಷ್ಮಣಸೂರಿ

ರಾಮಾಯಣ ಮತ್ತು ಮಹಾಭಾರತಗಳು ನಮ್ಮ ದೇಶದ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಶ್ರೇಷ್ಠ ಇತಿಹಾಸ ಗ್ರಂಥಗಳು. ಇವು ಜನಜೀವನದ ಮೇಲೆ ತಮ್ಮ ಅದ್ಭುತ ಪ್ರಭಾವವನ್ನು ಬೀರುತ್ತಾ ಬಂದಿವೆ. ಭಾರತವು ಗಾತ್ರದಲ್ಲೇ ಅಲ್ಲ ; ವಸ್ತುವಿನ ವೈವಿಧ್ಯ ದೃಷ್ಟಿಯಿಂದಲೂ ಮಹತ್ವಪೂರ್ಣವಾದ ಗ್ರಂಥ.

धर्मे च अर्थे च कामे च मोक्षे च भरतर्षभ ।
यदिहास्ति तदन्यत्र यन्नेहास्ति न तत्क्वचित् ॥

ಎಂಬ ಉಕ್ತಿಯು ಯಥಾರ್ಥವಾಗಿದೆ. ಈ ಕೃತಿಯಲ್ಲಿ ಇಲ್ಲದ ವಿಷಯುವೇ ಇಲ್ಲ. ಇದನ್ನು ಭಾರತ ದೇಶದ 'ಧರ್ಮಕೋಶ' ಎನ್ನುತ್ತಾರೆ. ಲಕ್ಷ ಶ್ಲೋಕಗಳ ಈ ಗ್ರಂಥ ಕಥೆ, ಉಪಾಖ್ಯಾನ, ರಾಜನೀತಿ, ಧರ್ಮ, ವೇದಾಂತ, ಅಧ್ಯಾತ್ಮ ತತ್ವಗಳನ್ನು ಪ್ರತಿಪಾದಿಸುತ್ತಾ ಭಿನ್ನ ರುಚಿಯ ಎಲ್ಲ ಜನರನ್ನೂ ತಣಿಸುತ್ತದೆ.

ಮಹಾಭಾರತವನ್ನು ಶ್ರೀ ಲಕ್ಷ್ಮಣಸೂರಿ (1859–1928) ಎಂಬ ವಿದ್ವಾಂಸರು ಗದ್ಯದಲ್ಲಿ ಸಂಗ್ರಹವಾಗಿ ಬರೆದಿದ್ದಾರೆ. ಇವರು ತಿರುನೆಲ್ವೇಲಿ (ತಮಿಳುನಾಡು) ಜಿಲ್ಲೆಯ ಪುನಲ್ವೇಲಿ ಎಂಬ ಗ್ರಾಮದಲ್ಲಿ ಜನಿಸಿದರು. ಇವರ ತಂದೆ ಪಂಡಿತ ಮುತ್ತು ಸುಬ್ಬ ಕವಿ ಶ್ರೇಷ್ಠ ಸಂಸ್ಕೃತ ವಿದ್ವಾಂಸರು ಇವರ ಬಳಿ ಲಕ್ಷ್ಮಣಸೂರಿಯವರು ವ್ಯಾಕರಣ, ವೇದಾಂತ, ಸಾಹಿತ್ಯ ಮೊದಲಾದವುಗಳನ್ನು ಆಳವಾಗಿ ಅಭ್ಯಾಸ ಮಾಡಿ ಸೇಂಟ್ ಪೀಟರ್ಸ್ ಕಾಲೇಜಿನಲ್ಲಿ ಸಂಸ್ಕೃತ ಬೋಧಕರಾಗಿ ತಮ್ಮ ಜೀವನವನ್ನಾರಂಭಿಸಿದರು.

ಇವರು ಶ್ರೀ ಶಂಕರಾಚಾರ್ಯರ ಭಾಷ್ಯವನ್ನಾಧರಿಸಿ ದಶೋಪನಿಷತ್ತಿಗೆ ಕಾರಿಕೆಯನ್ನು ಬರೆದಿದ್ದಾರೆ ಇವರು ಕೃಷ್ಣಲೀಲಾಮೃತ, ಭಾಗವತ ಪಾದಾಭ್ಯುದಯ ಮುಂತಾದ ಲಘುಕಾವ್ಯಗಳನ್ನೂ ರಚಿಸಿದ್ದಾರೆ. ಇವರು ಸ್ವತಃ ನಾಟಕಗಳನ್ನು ಬರೆದಿರುವುದಲ್ಲದೆ, ಭವಭೂತಿಯ ಉತ್ತರ ರಾಮಚರಿತೆ, ಭಟ್ಟ ನಾರಾಯಣನ ವೇಣೀ ಸಂಹಾರ, ಶ್ರೀಹರ್ಷನ ರತ್ನಾವಳೀ ಮುಂತಾದ ಪ್ರಸಿದ್ಧ ನಾಟಕಗಳಿಗೆ ವ್ಯಾಖ್ಯಾನವನ್ನೂ ಬರೆದಿದ್ದಾರೆ.

ಭಾರತ ಸಂಗ್ರಹ, ರಾಮಾಯಣ ಸಂಗ್ರಹ, ನಲೋಪಾಖ್ಯಾನ ಸಂಗ್ರಹ ಭೀಷ್ಮ ಸಂಗ್ರಹ ಇವು ಇವರ ಗದ್ಯ ಗ್ರಂಥಗಳು. ಹೀಗೆ ಸಂಸ್ಕೃತದ ಎಲ್ಲಾ ಪ್ರಕಾರಗಳಿಗೆ ತಮ್ಮ ಕಾಣಿಕೆಯನ್ನು ನೀಡಿದ್ದಾರೆ. ಸಂಸ್ಕೃತಗದ್ಯಸಾಹಿತ್ಯದ ಕೊರತೆಯನ್ನು ಸ್ವಲ್ಪಮಟ್ಟಿಗೆ ನೀಗಿಸಿದ್ದಾರೆ.

3. i) ಕಥೆಯ ಪಾತ್ರಪರಿಚಯ :

ಕ) ದುರ್ಯೋಧನ : ಕೌರವಪಕ್ಷದ ಹಿರಿಯ, ಧೃತರಾಷ್ಟ್ರನ ದೊಡ್ಡ ಮಗ, ಪಾಂಡವ ವಿರೋಧಿ, ಕರ್ಣ ಮಿತ್ರ.

ಖ) ಕರ್ಣ : ದುರ್ಯೋಧನನ ಅಭಿನ್ನ ಮಿತ್ರ, ಅರ್ಜುನನ ಪರಮ ಶತ್ರು.

ಗ) ಕೃಷ್ಣ : ಪಾಂಡವ ಪಕ್ಷಪಾತಿ, 'ಮಮ ಪ್ರಾಣಾ ಹಿ ಪಾಂಡವಾಃ' ಎಂದವನು, ಮೂರು ಲೋಕದ ಸ್ವಾಮಿ, ಕರ್ಣವಧೆಗೆ ಅರ್ಜುನನನ್ನು ಪ್ರೇರಿಸಿದವನು.

ಘ) ಅರ್ಜುನ : ಪಾಂಡವ ಬಲದ ಶಕ್ತಿ, ಕುಂತಿಯ ಮಗ, ಕೃಷ್ಣನ ಮೆಚ್ಚಿನ ಶಿಷ್ಯ, ಕರ್ಣನ ಪರಮ ಶತ್ರು.

ಙ) ಪಾಂಡವರು : ಧರ್ಮರಾಜ, ಭೀಮ, ಅರ್ಜುನ, ನಕುಲ, ಸಹದೇವ.

ಚ) ಶಲ್ಯ : ಪಾಂಡವರ ಸೋದರ ಮಾವ, ಕರ್ಣ ಸಾರಥಿ.

ii) ಕಠಿಣ ಪದಗಳ ಅರ್ಥ : हैमः तपनः–ಹಿಮದಿಂದ ಮುಚ್ಚಿದ ಸೂರ್ಯ समारुतेन–ಭೀಮನೊಡಗೂಡಿದ परवाहिनीं–ಶತ್ರುಸೇನೆಯನ್ನು कदर्यः–ಜಿಪುಣ वैवस्वतत्वं–ಸೂರ್ಯನ ಮಗನೆಂಬುದನ್ನು वेतण्डौ–ಎರಡು ಆನೆಗಳು नियोज्यः – ಸೇವಕ दौष्कुलेयः – ನೀಚಕುಲದಲ್ಲಿ ಹುಟ್ಟಿದವನು अभ्युद्यतौ–ಎತ್ತಿದ ಗತ್ತಿಯುಳ್ಳ सर्वंकषः–ನಿರ್ನಾಮ ಮಾಡುವ आगः–ಅಪರಾಧ गेहे क्ष्वेडिनम्–ಮನೆಯಲ್ಲಿ ಮಾತ್ರ ಗರ್ಜಿಸುವವನು अनघ-नामानं – ಪೂಜ್ಯನಾದ विगीतं – ನಿಂದ್ಯವಾದ विकर्तनः – ಸೂರ್ಯ सम्परायः–ಯುದ್ಧ किष्कुः–ಗೇಣು

4. ಕಥೆಯ ಪ್ರಶ್ನೋತ್ತರ :

ದುರ್ಯೋಧನನು, ಕರ್ಣನನ್ನು ಕರೆದು ಹೀಗೆ ಹೇಳಿದನು : ಮಿತ್ರ, ಭೀಷ್ಮ-ದ್ರೋಣರು ನೆಪದಿಂದ ನಮ್ಮವರನ್ನೇ ಕೊಲ್ಲಿಸಿ ತಾವೂ ಶಾಂತರಾದರು. ಈಗ ನಿನ್ನ ಮತ್ತು ನನ್ನ ದ್ವೇಷಿಗಳು ನಾಶವಾಗುವ ಕಾಲ ಬಂದಿದೆ ನೀನು ನನ್ನನ್ನು ಅನುಗ್ರಹಿಸು. - ಸೇನಾಧಿಪತ್ಯವನ್ನು ಸ್ವೀಕರಿಸು."

ಪ್ರಶ್ನೆ : ದುರ್ಯೋಧನನು ಕರ್ಣನಿಗೆ ಹೇಳಿದ್ದೇನು ?

ಪಟ್ಟಾಭಿಷಿಕ್ತನಾದ ಕರ್ಣನು, ಉತ್ಸಾಹದಿಂದ ಶತ್ರು ಸೈನ್ಯವನ್ನು ಹೊಕ್ಕು ಮೃತ್ಯುವಿನಂತೆ ಶತ್ರುಸಂಹಾರ ಮಾಡಿದನು ತನ್ನನ್ನು ಕೊಲ್ಲಲು ಬಂದ ನಕುಲನನ್ನು ತಾಯಿಗೆ ಕೊಟ್ಟ ಮಾತಿನಂತೆ ಸಂರಕ್ಷಿಸಿದನು.

ಪ್ರಶ್ನೆ : ಸೇನಾಪತಿಯಾದ ಕರ್ಣನು ಮೊದಲು ಮಾಡಿದ್ದೇನು ?

ಕರ್ಣನು ದುರ್ಯೋಧನನನ್ನು ಕುರಿತು ಇಂತು ಹೇಳಿದನು : "ಎಲೈ ಮಹಾರಾಜನೇ, ನನಗಿಂತಲೂ ಅರ್ಜುನನು ಕುಶಲನಾದ ಸಾರಥಿಯನ್ನು ಹೊಂದಿದ್ದಾನೆ. ಆದುದರಿಂದ ಕೃಷ್ಣನಿಗೆ ಸಮಾನನಾದ ಮದ್ರರಾಜನನ್ನು ನನಗೆ ಸಾರಥಿಯನ್ನಾಗಿ ಮಾಡು. ಅರ್ಜುನನ ಕತ್ತಿನಿಂದ ನಿನ್ನ ಧ್ವಜವನ್ನು ಅಲಂಕರಿಸು." ಈ ಮಾತಿನಿಂದಲೇ ಸಫಲನಾದಂತೆ ಸುಯೋಧನನು ಶಲ್ಯನ ಮನೆಗೆ ಬಂದನು.

ಶಲ್ಯನಲ್ಲಿ ಯಾಚನಾಪೂರ್ವಕವಾಗಿ ಹೀಗೆ ಕೇಳಿಕೊಂಡನು. " ಎಲೈ ಮಾವನೆ, ಇಂದಿಗೆ ಕರ್ಣನು ಮತ್ತು ನೀನು ಈರ್ವರೇ ಮಹಾರಥರು. ನೀವು ನನ್ನ ಮನೋರಥದ ಕಲ್ಪವೃಕ್ಷಗಳು. ಕೃಷ್ಣಾರ್ಜುನರಂತೆ ಒಂದೇ ರಥದಲ್ಲಿ ಕುಳಿತು ಯುದ್ಧಮಾಡಿ ವಿಜಯವನ್ನು ಸಂಪಾದಿಸಿಕೊಡಿ. ನೀನು ಕರ್ಣನಿಗೆ ಸಾರಥಿಯಾಗಿ ಎಲ್ಲ ಸಂದರ್ಭಗಳಲ್ಲಿಯೂ ಕಾಪಾಡು" ಎಂದನು ದುರ್ಯೋಧನನ ಈ ಮಾತನ್ನು ಕೇಳಿ ಕೋಪಗೊಂಡ ಶಲ್ಯನು ಈ ರೀತಿ ಉತ್ತರಿಸಿದನು : "ಎಲೈ ಸುಯೋಧನನೆ, ನನ್ನನ್ನು ಕರ್ಣನಿಗೆ ಸೇವಕನನ್ನಾಗಿ ಮಾಡಬೇಕೆಂದಿರುವೆಯಾ ? ಪಟ್ಟಾಭಿಷಿಕ್ತನಾದ ನಾನು ಅಧೀನ ರಾಜನಿಗೆ ಹೇಗೆ ಸೇವಕನಾಗಲಿ ? ಗೌರವಶಾಲಿಯಾದ ನನಗೆ ಅಪಮಾನ

ಮಾಡಬೇಡ," ಸುಯೋಧನನು ಶಲ್ಯನನ್ನು ಸಮಾಧಾನಪಡಿಸುತ್ತ ಹೀಗೆ ಹೇಳಿದನು : "ಮಾವನೆ, ನೀನು ಕೃಷ್ಣನಿಗೆ ಸಮನು, ನೀನು ಕರ್ಣನನ್ನು ಕಾಪಾಡು. ನಿನ್ನನ್ನು ಕರ್ಣನಿಗಿಂತ ಹೀನವಾಗಿ ಮಾಡುತ್ತಿಲ್ಲ. ಕರ್ಣನು ಹೀನಕುಲದವನೆಂದು ಶಂಕಿಸಬೇಡ. ಅವನ ರೂಪವೇ ಮಹಾಕುಲದಲ್ಲಿ ಹುಟ್ಟಿದವನೆಂದು ಹೇಳುತ್ತದೆ. ಶಲ್ಯನೆ, ಕರ್ಣನಿಗೆ ಸಾರಥಿಯಾಗಿ ಅವನನ್ನು ಸಂಕಟ ಸಮಯದಲ್ಲಿ ಕಾಪಾಡು" ಈ ಮಾತುಗಳಿಂದ ಸಮಾಧಾನಗೊಂಡ ಶಲ್ಯನು ಇಂತು ನುಡಿದನು : "ಎಲೈ ಬುದ್ಧಿವಂತನೆ, ನೀನು ನನ್ನ ಬಲವನ್ನು ವಾಸುದೇವನ ಬಲಕ್ಕೆ ಹೋಲಿಸಿರುವೆ ನಿನ್ನ ಮಾತು ಸತ್ಯ, ಆದ್ದರಿಂದಲೇ ನಿನ್ನ ಮಾತನ್ನು ಪುರಸ್ಕರಿಸಿರುವೆನು ಆದರೆ ಪಾರ್ಥನು ಕೃಷ್ಣನು ಹೇಳಿದ ರೀತಿಯಲ್ಲಿ ನಡೆಯುವಂತೆ ಹಿತವನ್ನು ಬಯಸುವ ನನ್ನ ಮಾತನ್ನು ಸಮಾಧಾನದಿಂದ ಕರ್ಣನು ಒಪ್ಪುವುದಾದರೆ ನಾನು ಸಾರಥಿಯಾಗುವೆನು."

ಪ್ರಶ್ನೆ : ಸಾರಥಿತನವನ್ನು ವಹಿಸುವುದರಲ್ಲಿ ಕರ್ಣ-ಸುಯೋಧನ-ಶಲ್ಯರಲ್ಲಿ ನಡೆವ ಸಂಭಾಷಣೆಯನ್ನು ಬರೆಯಿರಿ.

ಸಾರಥ್ಯವನ್ನು ಒಪ್ಪಿಕೊಂಡು, ಕರ್ಣನ ಕುದುರೆಗಳ ಕಡಿವಾಣವನ್ನು ಹಿಡಿದು ನಿಂತ ಶಲ್ಯನು ಕರ್ಣನಿಗೆ ಹೇಳಿದನು : ಎಲೈ ಕರ್ಣನೇ, ಇದು ಆಟದ ತಾಣವಲ್ಲ. ನೀನು ಮನಬಂದಂತೆ ಹರಟುತ್ತಾ ನೀಚರಿಂದ ಹೊಗಳಿಸಿಕೊಳ್ಳಬಹುದಷ್ಟೆ ! ಈ ಯುದ್ಧರಂಗ ನಿನ್ನ ಪರಾಕ್ರಮದ ಒರೆಗಲ್ಲೆಂದು ತಿಳಿ. ಆತ್ಮರಕ್ಷಣೆಯನ್ನು ಬಯಸುವುದಾದರೆ ಪಾರ್ಥನನ್ನು ಗೆಲ್ಲುವ ಆಸೆಯನ್ನು ಬಿಟ್ಟುಬಿಡು." ಶಲ್ಯನ ಮಾತನ್ನು ಲಕ್ಷಿಸದೆ 'ಕುದುರೆಗಳನ್ನು ಬಿಡು' ಹಾಗೆಯೇ ಮಾಡಿದ ಶಲ್ಯನು ಕರ್ಣನನ್ನು ಕುರಿತು ಇಂತೆಂದನು. "ಕರ್ಣನೇ, ಎಡಹುತ್ತಿರುವ ಕುದುರೆಗಳನ್ನು ನೋಡು, ಇವರಿಂದ ನನ್ನ ಮನಸ್ಸು ಅಸಮಾಧಾನಗೊಂಡಿದೆ. ನನ್ನ ಮಾತು ಮೀರಿದರೆ ನೀನು ನಾಶವಾಗುವೆ" ಎಂದನು. ಆದರೂ ಕರ್ಣನು ಯುದ್ಧಕ್ಕೆ ಹೋಗಿ ಅರ್ಜುನನೆಲ್ಲಿ ? "ಅವನಿರವನ್ನು ತೋರಿದವನು ಬಹುಮಾನಿತನಾಗುತ್ತಾನೆ" ಎಂದನು. ಇದನ್ನು ಕೇಳಿ ಸಹಿಸದ ಶಲ್ಯನು "ಎಲೈ ರಾಧೇ

ಯನೇ ಭೀಷ್ಮದ್ರೋಣಾದಿಗಳು ಯಾರಿಂದ ಜಯಿಸಲ್ಪಟ್ಟರೋ ಅವರ ಮುಂದೆ ನಿನ್ನ ಮಾತೇನು ? ನಿನ್ನನ್ನು ಹರಟುವವನೆಂದು ಹಾಸ್ಯ ಮಾಡು ವರು" ಎಂದನು. ಈ ಮಾತು ಕೇಳಿದ ಕರ್ಣನು ಶಲ್ಯನಿಗೆ "ಎಲೈ ಗುಪ್ತ ಶತ್ರುವೆ ! ನಾನು ನಿನ್ನನ್ನು ಈ ಬಗೆಗೆ ಕೇಳುವುದಿಲ್ಲ." ಎಂದು ನಿಂದಿಸಿ, ಗದರಿಸಿದನು

ಪ್ರಶ್ನೆ : i) ಯುದ್ಧ ಭೂಮಿಗೆ ತೆರಳಿದ ಕರ್ಣ-ಶಲ್ಯರ ನಡುವೆ ನಡೆದ ಮಾತುಕತೆಗಳೇನು ? ii) ಕರ್ಣನು ಶಲ್ಯನನ್ನು ಗುಪ್ತಶತ್ರು ವೆಂದು ಹೇಳಿದ ಸಂದರ್ಭ ಯಾವುದು ?

ಕರ್ಣನು, ಯುದ್ಧರಂಗದಲ್ಲಿ ಯುಧಿಷ್ಠಿರನನ್ನು ಬಹುವಾಗಿ ಮರ್ದಿ ಸುತ್ತಿರುವುದನ್ನು ಕಂಡು, ಯುಧಿಷ್ಠಿರನನ್ನು ಸಂಕಟದಿಂದ ಪಾರುಮಾಡ ಲು ಶಲ್ಯನು " ಎಲೈ ಕರ್ಣನೆ, ಅಶಕ್ತರಾದ ಇವರೊಡನೆ ನಿನಗೆ ಯುದ್ಧ ಸರಿಯಲ್ಲ. ನಿನಗೆ ಸಮಾನ ವೀರ ಭೀಮನಿದ್ದಾನೆ ಅವನೊಡನೆ ಸೆಣಸು ನಡೆ " ಎಂದನು.

ಪ್ರಶ್ನೆ : ಶಲ್ಯನು, ಭೀಮನೊಡನೆ ಸೆಣಸೆಂದು ಕರ್ಣನನ್ನು ಹೇಗೆ ಪ್ರೇರಿಸಿದನು ?

ಸಮಸಪ್ತಕ ಸಮೂಹವನ್ನು ಕೊಂದು ಹಿಂದಿರುಗಿದ ಪಾರ್ಥನು ಯುದ್ಧಭೂಮಿಯಲ್ಲಿ ಬಲವಾಗಿ ಯುದ್ಧಮಾಡುತ್ತಿರುವ ಕರ್ಣನನ್ನು ನೋಡಿ ಯುಧಿಷ್ಠಿರನನ್ನೂ ನಕುಲ ಸಹದೇವರನ್ನೂ ಕಾಣದೆ, ಯುದ್ಧ ಮಾಡುತ್ತಿರುವ ಭೀಮನನ್ನು 'ಅಣ್ಣನೆಲ್ಲಿ ' ಎಂದು ಕೇಳಿದನು ಅವನು 'ನಾನರಿಯೆ' ಎಂದು ಹೇಳಲಾಗಿ ಗಾಬರಿಯಿಂದ ಶಿಬಿರಕ್ಕೆ ಹೋಗಿ ಅಲ್ಲಿ ಅಣ್ಣನನ್ನು ಕಂಡು ಹರ್ಷದಿಂದ ಅವನ ಶ್ರೀಚರಣಗಳಲ್ಲಿ ನಮಸ್ಕರಿಸಿದನು. ಸಂತೋಷದಿಂದ ನಮಸ್ಕರಿಸಿದ ತಮ್ಮನನ್ನು ಕಂಡು, ಅವನು ಕರ್ಣನನ್ನು ಗೆದ್ದು ಬಂದನೆಂದೇ ತಿಳಿದನು ಮತ್ತು ಕುತೂಹಲದಿಂದ ಅವರ ಯುದ್ಧ ವಿವರಣೆಯನ್ನು ಕೇಳಿದನು. ಈ ಮಾತು ಕೇಳಿ ಪಾರ್ಥನು " ಪೂಜ್ಯನೇ, ಯುದ್ಧರಂಗದಲ್ಲಿ ನಿಮ್ಮನ್ನು ಕಾಣದೆ ಗಾಬರಿಯಿಂದ ಇಲ್ಲಿಗೆ ಬಂದೆನು ಎಂದನು. ಯುಧಿಷ್ಠಿರನು ಎಂದೂ ಇಲ್ಲದ ಉಗ್ರ ಕೋಪದಿಂದ ತಮ್ಮ

ನನ್ನು ಧಿಕ್ಕರಿಸಿ, "ಕರ್ಣನ ಬಗೆಗೆ ಬಹಳವಾಗಿ ಹರಟುತ್ತಿದ್ದೆ ಈಗ ಸಮಯ ಒದಗಿದಾಗ ಹೇಡಿಯಂತೆ ಇಲ್ಲಿಗೆ ಬಂದಿರುವೆ. ಈ ಗಾಂಡೀವದಿಂದ ನಿನಗೇನು ಪ್ರಯೋಜನ ? ಆ ಸೂತಪುತ್ರನನ್ನು ಕೊಲ್ಲುವವನಿಗೆ ಕೊಟ್ಟು ಬಿಡು" ಎಂದು ಅಲ್ಲಗಳೆದನು.

ಪ್ರಶ್ನೆ : ಸಮಸಪ್ತಕ ಯುದ್ಧಾನಂತರ ಅರ್ಜುನನು ಮಾಡಿದ್ದೇನು? ಅನಿರೀಕ್ಷಿತವಾಗಿ ಶಿಬಿರಕ್ಕೆ ಬಂದ ಪಾರ್ಥನನ್ನು ಕಂಡು ಧರ್ಮರಾಜನು ನುಡಿದಿದ್ದೇನು ? ಅರ್ಜುನನು ಕೊಟ್ಟ ಸಮಾಧಾನವೇನು ? ಕೋಪಗೊಂಡ ಧರ್ಮರಾಜನು ಏನೆಂದು ನುಡಿದನು ?

ಅರ್ಜುನನು ಖಡ್ಗವನ್ನೆತ್ತಲು ಪ್ರಯತ್ನಿಸುವುದನ್ನು ಕಂಡು ಕೃಷ್ಣನು ಇದೇನೆಂದು ಕೇಳಿದನು ? "ಮಿತ್ರನೆ, ಗಾಂಡೀವನ್ನು ಇನ್ನೊಬ್ಬನಿಗೆ ಕೊಡೆಂದವನನ್ನು ಕೊಲ್ಲುವುದು ನನ್ನ ವ್ರತವು. ನೀನು ಕೇಳುವಂತೆಯೇ ಗಾಂಡೀವನನ್ನು ತಿರಸ್ಕರಿಸಿದ ಇವನ ಶಿರವನ್ನು ಕತ್ತರಿಸಿ ಸತ್ಯಪ್ರತಿಜ್ಞನಾಗುವೆ.

ಕೃಷ್ಣನು ಪಾರ್ಥನನ್ನು ಧಿಕ್ಕರಿಸಿ "ಎಲೆ ಪಾಪೀ, ಪಿತೃತುಲ್ಯ ಅಣ್ಣನನ್ನು ಕೊಂದು ಯಾವ ನರಕಕ್ಕೆ ಹೋಗುವೆ ? ಗುರುಹತ್ಯೆಯಿಂದ ವ್ರತವನ್ನು ಪೂರೈಸುವೆಯಾ ? ಸತ್ಯ-ಧರ್ಮ ಉಳಿಸುವ ಕಾರ್ಯ ನಡೆದಂತೆಯೇ ಆಯಿತು ! ಹೆಸರಿಗೆ ತಕ್ಕ ಕೆಲಸ ಮಾಡಿದಂತಾಗಲಿಲ್ಲ.

ಓರ್ವ ತಪಸ್ವಿಯು ಸತ್ಯವನ್ನೇ ಹೇಳುವೆನೆಂದು ಅಡಗಿಕೊಂಡಿದ್ದ ಬ್ರಾಹ್ಮಣರನ್ನು ಕಳ್ಳರಿಗೆ ಬಲಿಕೊಟ್ಟು ನರಕಕ್ಕೆ ಹೋದನು. ಲೋಕಕ್ಕೆ ಪೀಡೆ ಕೊಡುತ್ತಿದ್ದ ಹುಲಿಯನ್ನು ಕೊಂದು ವ್ಯಾಧನು ಸ್ವರ್ಗಕ್ಕೆ ಹೋದನು.

ಸ್ವಬುದ್ಧಿಕಲ್ಪಿತ ವ್ರತಪಾಲನೆಗೆ ಗುರುಹತ್ಯೆ ಮಾಡುವ ಕೆಟ್ಟ ಆಚರಣೆ ಬಿಟ್ಟುಬಿಡು.

ಪ್ರಶ್ನೆ : 1) ಧರ್ಮರಾಜನ ತಿರಸ್ಕಾರದ ನುಡಿಗೇಳಿ ಅರ್ಜುನನು ಮಾಡಿದ ಕೆಲಸವೇನು ? ಅದಕ್ಕೆ ಕೃಷ್ಣನು ಹೇಳಿದುದೇನು ?

2) ಅರ್ಜುನನ ವ್ರತ ಯಾವುದು ? ಅದನ್ನು ಯಾವ ರೀತಿಯಿಂದ ಪಾಲಿಸಲಾಯಿತು ?

ಶ್ರೀಕೃಷ್ಣನ ಉಪದೇಶವನ್ನು ಕೇಳಿ ಅರ್ಜುನನು ನಡುಗಿ ಪ್ರಾರ್ಥಿಸಿದ

"ಎಲೈ ಭಗವಂತನೇ, ನನ್ನ ಸತ್ಯವ್ರತವೂ ಅಣ್ಣನ ವಧೆಯ ಪಾಪ ನಾಶವೂ ಆಗುವಂತೆ ಪ್ರಾಯಶ್ಚಿತ್ತವನ್ನು ಹೇಳು" ಎಂದನು. ಶ್ರೀಕೃಷ್ಣನು ಹೇಳಿದನು: "ಎಲೈ ಪಾರ್ಥನೇ, ಅಣ್ಣನನ್ನು ಕೆಲವು ಅಕ್ಷರಗಳಿಂದ ನಿಂದಿಸು ಗೌರವಸ್ಥರಿಗೆ ತಿರಸ್ಕಾರವೆಂಬುದು ವಧೆಗಿಂತಲೂ ಅಧಿಕ." ಆ ಮಾತನ್ನು ಕೇಳಿ ಅಣ್ಣನನ್ನು "ಎಲೈ ಹೇಡಿಯೇ ಯುದ್ಧರಂಗದಿಂದ ಓಡಿಬಂದ ನಿನಗೆ ನಾಚಿಕೆ ಯಿಲ್ಲವೆ ಎಂದು ಹಿಂದಿನ ಜೂಜಿನ ವಿಚಾರವನ್ನೆಲ್ಲಾ ಎತ್ತಿ ಆಡಿದನು." ಈ ರೀತಿ ಅಣ್ಣನನ್ನು ಅಂದು ಯಾವ ಪ್ರಾಯಶ್ಚಿತ್ತ ಮಾಡಿಕೊಳ್ಳಲಿ. ನನ್ನ ತಲೆಯನ್ನು ಕತ್ತರಿಸಿಕೊಳ್ಳುತ್ತೇನೆ ಎಂದನು. ಆ ಮಾತಿಗೆ ಕೃಷ್ಣನು 'ಎಲೈ ಮೂಢನೇ, ಪಶ್ಚಾತ್ತಾಪದಿಂದ ಪ್ರಾಯಶ್ಚಿತ್ತ ಮಾಡಿಕೋ ಆತ್ಮಹತ್ಯೆಯಿಂದ ಹಿಂದಿರುಗು' ಎಂದನು. ಆಗ ಧರ್ಮರಾಜನು "ಕೃಷ್ಣನೇ ನಿಂದಾರ್ಹ ಕೆಲಸ ಮಾಡಿದ ನಾನು ಏಕಿರಬೇಕು? ಕಾಡಿಗೆ ಹೋಗುವೆ ಕ್ಷಮಿಸು" ಎಂದು ಕೃಷ್ಣನ ಪಾದಕ್ಕೆ ಎರಗಿದನು. ಕೃಷ್ಣನು ಧರ್ಮರಾಜನಿಗೆ ಸಮಾಧಾನ ಹೇಳಿ ಶಾಂತಗೊಳಿಸಿದನು.

ಪ್ರಶ್ನೆ: i) ಅಸಿಧಾರಾವ್ರತ ಪರಿಪಾಲನೆಗಾಗಿ ಶ್ರೀಕೃಷ್ಣನ ಸಲಹೆ ಯಂತೆ ಮಾಡಿದ ಕಾರ್ಯವೇನು? ಅದರ ಪರಿಣಾಮವೇನಾಯಿತು?

ii) ಧರ್ಮರಾಜನನ್ನು ಅರ್ಜುನನು ಏನೆಂದು ನಿಂದಿಸಿದನು? ಅದರ ಪರಿಣಾಮವೇನಾಯಿತು?

ಧರ್ಮರಾಜನಿಂದ ಅಪ್ಪಣೆ ಪಡೆದು ಕೃಷ್ಣಾರ್ಜುನರು ಯುದ್ಧರಂಗಕ್ಕೆ ಬಂದರು. ಇಷ್ಟರಲ್ಲಿ ಕರ್ಣನು ಸುಷೇಣನೇ ಮೊದಲಾದ ತನ್ನ ಮಕ್ಕಳು ಸತ್ತದ್ದರಿಂದ ಕೋಪಗೊಂಡು ಶತ್ರುಗಳ ಮೇಲೆ ಬಿದ್ದನು. ಅರ್ಜುನನು ಅವನೆದುರಿನಲ್ಲಿಯೇ ಅವನ ಮಗ ವೃಷಸೇನನನ್ನು ಕೊಂದನು. ಪುತ್ರವಧೆ ಯಿಂದ ನೊಂದ ಕರ್ಣನು ಶತ್ರುಗಳನ್ನೆದುರಿಸಲು ಸಿದ್ಧನಾದನು. ಕರ್ಣಾ-ರ್ಜುನರ ಯುದ್ಧವನ್ನು ನೋಡಲು ದೇವತೆಗಳು ಆಕಾಶದಲ್ಲಿ ನೆರೆದರು. ಇಬ್ಬರಿಗೂ ಘೋರಯುದ್ಧವಾಯಿತು. ಬಾಣಗಳ ಮಳೆಯಿಂದ ಆಕಾಶವೆ ಲ್ಲಾ ತುಂಬಿತು ಕತ್ತಲೆ ಕವಿಯಿತು. ಒಮ್ಮೆ ಕತ್ತಲೆ, ಬೆಳಕು, ಸೆಕೆ, ಶೀತ ಈ ರೀತಿ ಅವಿಶ್ರಾಂತರಾಗಿ ಸೆಣಸಿದರು.

ಪ್ರಶ್ನೆ : ಕರ್ಣಾರ್ಜುನರ ಕಾಳಗವನ್ನು ವರ್ಣಿಸಿ.

ಖಾಂಡವವಹನದಲ್ಲಿ ತಾಯಿಯನ್ನು ಕಳೆದುಕೊಂಡ ತಕ್ಷಕಪುತ್ರನು ತನ್ನ ಬಾಲವು ಕತ್ತರಿಸಲ್ಪಟ್ಟ ಅಶ್ವಸೇನ ಎಂಬ ಸರ್ಪವು ಪಾರ್ಥನಲ್ಲಿ ದ್ವೇಷವಿಟ್ಟು ಸಮಯ ಕಾಯುತ್ತಿದ್ದಿತು. ಈಗ ಕರ್ಣನ ಬತ್ತಳಿಕೆಗೆ ಬಂದು ಸೇರಿತು. ಇದನ್ನರಿತ ಶಲ್ಯನ ಮಾತನ್ನು ಲೆಕ್ಕಿಸದೆ ಪಾರ್ಥನ ಮೇಲೆ ಈ ಬಾಣವನ್ನು ಪ್ರಯೋಗಿಸಿದನು. ಇದನ್ನರಿತ ಕೃಷ್ಣನು ರಥವನ್ನು ಅದುಮಿದನು. ಬಾಣವು ಅರ್ಜುನನ ಕಿರೀಟವನ್ನು ಹಾರಿಸಿತು, ಅದೇ ಹಿಂದಿರುಗಿ ಬಂದು ಮತ್ತೆ ಪ್ರಯೋಗಿಸುವಂತೆ ಕೇಳಿಕೊಂಡಿತು. ಆದರೆ ತಾಯಿಗೆ ಕೊಟ್ಟ ಮಾತಿಗಾಗಿ ಕರ್ಣನು ಒಪ್ಪಲಿಲ್ಲ. ತಾನೇ ಎದುರಿಸಿ ಕೊಲ್ಲುವೆನೆಂದು ಬಂದು ಅರ್ಜುನನಿಂದ ಕತ್ತರಿಸಲ್ಪಟ್ಟು ತಾಮಸಯ ಸ್ಥಾನಕ್ಕೆ ಹೋಯಿತು.

ಪ್ರಶ್ನೆ : ಅಶ್ವಸೇನ ಯಾರು ? ಇವನು ಕರ್ಣನ ಬತ್ತಳಿಕೆಗೆ ಏಕೆ ಸೇರಿದನು ? ಈ ಅಸ್ತ್ರಪ್ರಯೋಗದ ಪರಿಣಾಮವೇನಾಯಿತು ? ಅಸ್ತ್ರವು ಮತ್ತೆ ಕರ್ಣನನ್ನು ಏನೆಂದು ಪ್ರಾರ್ಥಿಸಿತು ? ಕರ್ಣನು ಕೊಟ್ಟ ಉತ್ತರವೇನು ?

ಕರ್ಣನು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಲು ಯೋಚಿಸಿದನು. ಭೂಮಿಯು ಕಳೆಗುಂದಿ ಕರ್ಣನ ರಥವು ಭೂಮಿಯಲ್ಲಿ ಹೂತುಹೋಯಿತು. ಕರ್ಣನು ಗಾಬರಿಯಿಂದ ರಥದಿಂದಿಳಿದು ಅರ್ಜುನನನ್ನು ಕುರಿತು "ಎಲೈ ಪಾರ್ಥನೇ, ಕ್ಷಣಕಾಲ ನಿಲ್ಲು, ರಥವನ್ನು ಮೇಲೆತ್ತುತ್ತೇನೆ. ಕಷ್ಟದಲ್ಲಿರುವವರನ್ನು ಧರ್ಮವು ಕಾಪಾಡುತ್ತದೆ ; ಸುಖದಲ್ಲಿರುವಾಗ ಕಾಯುವುದಿಲ್ಲ –ಎಂದನು ಆಗ, ಕೃಷ್ಣನು "ಜೂಜಾಡುವಾಗ ಕರ್ಣನಿಗೆ ಧರ್ಮವು ಏಕೆ ತಿಳಿಯಲಿಲ್ಲ ? ಈ ದುಷ್ಟನನ್ನು ಈಗಲೇ ಕೊಲ್ಲು" ಎಂದನು. ಇಂತು ಕೃಷ್ಣಪ್ರೇರಿತನಾದ ಪಾರ್ಥನು ದಿವ್ಯಾಸ್ತ್ರದಿಂದ ವೀರಪುಂಗವನೆನಿಸಿದ ಕರ್ಣನನ್ನು ಹೊಡೆದು ನಿಂತಿರುವಾಗಲೇ ಭೂಮಿಯ ಮೇಲೆ ಮಲಗಿದನು. ಆ ಕರ್ಣನ ಶರೀರದಿಂದ ಹೊರಬಂದ ಜ್ಯೋತಿಯೊಂದು ಎಲ್ಲಾ ನೋಡುತ್ತಿದ್ದಂತೆಯೇ ಸೂರ್ಯಮಂಡಲದಲ್ಲಿ ಪ್ರವೇಶಿಸಿತು.

ಪ್ರಶ್ನೆ : ಕರ್ಣಾರ್ಜುನರಿಗೆ ನಡೆದ ಸಂಭಾಷಣೆ ಏನು ? ಈ ಸಂದರ್ಭದಲ್ಲಿ ಅರ್ಜುನನಿಗೆ ಕೃಷ್ಣನು ಹೇಳಿದ ಮಾತೇನು ? ಪರಿಣಾಮವೇನು ?

## 6 विश्रुतचरितम्

## [ ವಿಶ್ರುತಚರಿತೆ ]

1. ಕಥೆಯಲ್ಲಿ :

ವಿಶ್ರುತನು, ತನ್ನ ಅನುಭವಗಳನ್ನು, ರಾಜಹಂಸಮಹಾರಾಜನಿಗೆ ಹೇಳಿದ್ದಾನೆ. ಇಲ್ಲಿ ಮಂತ್ರಿಯ ಸದುಪದೇಶವೂ, ಮಿತ್ರರ ದುರುಪದೇಶವೂ ಉಕ್ತವಾಗಿದೆ. ಸದುಪದೇಶದಿಂದ ಬದುಕುವುದನ್ನೂ ದುರುಪದೇಶದಿಂದ ಹಾಳಾಗುವುದನ್ನೂ ಕಾಣಬಹುದು.

2. ಕಥೆಯ ಆಕರ :

ಈ ಕಥೆಯನ್ನು 'ದಶಕುಮಾರಚರಿತೆ'ಯಿಂದ ಆರಿಸಲಾಗಿದೆ.

ಕೃತಿಕಾರನ ಪರಿಚಯ : ಮಹಾಕವಿ ದಂಡಿಯ ದೇಶಕಾಲಪರಿಚಯ

'गद्यं कवीनां निकषं वदन्ति'

ಗದ್ಯರಚನೆಯು ಕವಿಗಳ ಒರೆಗಲ್ಲು.

ದಂಡಿ, ಬಾಣ ಮತ್ತು ಸುಬಂಧು— ಈ ಮೂವರೂ 'ಗದ್ಯರತ್ನತ್ರಯ'ರೆನಿಸಿದ್ದಾರೆ. ದಶಕುಮಾರಚರಿತೆ, ಕಾದಂಬರಿ– ಈ ಎರಡೂ ಜನಾದರಣೆ ಗಳಿಸಿದ ಸಂಸ್ಕೃತ ಗದ್ಯಕಾವ್ಯಗಳು. ಸರಸ್ವತಿಯು 'कविर्दण्डी न संशयः' ಎಂದು ಹೊಗಳಿದರೆ, ಕಾಳಿದಾಸನನ್ನು 'स्वयमेवाहं न संशयः' ಎಂದು ಪ್ರಶಂಸಿಸಿದ್ದಾಳೆ.

ಪ್ರಾಮಾಣಿಕ ಜೀವನಚರಿತ್ರೆಯ ಆಧಾರ ಗ್ರಂಥ :

ಕ್ರಿ. ಶ. 1924 ರಲ್ಲಿ ಶ್ರೀ ಎಂ. ರಾಮಕೃಷ್ಣ ಕವಿಗಳು ಪ್ರಕಾಶಪಡಿಸಿದ ದಂಡಿವಿರಚಿತವೆಂದು ಹೇಳಲಾದ 'ಅವಂತಿಸುಂದರೀ ಕಥಾ' ಗ್ರಂಥವು ದಂಡಿಯ ಜೀವನಚರಿತ್ರೆಗೆ ಆಧಾರವಾಗಿದೆ.

ಪೂರ್ವಜರು : ಗುಜರಾತಿನ ಆನಂದಪುರದಲ್ಲಿ ನೆಲಸಿದ್ದು, ಮುಂದೆ ವಿದರ್ಭದ ಅಚಲಪುರಕ್ಕೆ ತೆರಳಿದ ಕೌಶಿಕ ಗೋತ್ರದ ಬ್ರಾಹ್ಮಣವಂಶದಲ್ಲಿ

ದಂಡಿಯು ಅವತರಿಸಿದನು. ಈತನ ತಂದೆಯು ವೀರದತ್ತ ; ತಾಯಿ ಗೌರಿ ಇವರ ಮುತ್ತಾತನೇ 'ಕಿರಾತಾರ್ಜುನೀಯ' ವನ್ನು ರಚಿಸಿದ ಭಾರವಿ

ಕಾಲ : 1) ಅವಂತಿ ಸುಂದರೀ ಕಥೆಯ ಪ್ರಕಾರ ದಂಡಿಯು ಕಾಲ ಕ್ರಿ. ಶ. 650. 2) 5 ನೇ ಶತಕದಲ್ಲಿ ಮಹಾರಾಷ್ಟ್ರೀ ಪ್ರಾಕೃತ ಭಾಷೆಯಲ್ಲಿ 'ಪ್ರವರಸೇನ ವಿರಚಿತ ಸೇತುಬಂಧ'ದ ಪ್ರಕಾರ ಈತನು ಐದನೆಯ ಶತಮಾನಕ್ಕಿಂತ ಹಿಂದಿನವರನಿರಬಹುದೆಂದು ಹೇಳಲಾಗಿದೆ. ಕಾರಣ ದಂಡಿಯು ತನ್ನ 'ಕಾವ್ಯಾದರ್ಶ' ದಲ್ಲಿ ಈ ಗ್ರಂಥವನ್ನು ಉಲ್ಲೇಖಿಸಿದ್ದಾನೆ.

3) ಕನ್ನಡ ಕವಿರಾಜಮಾರ್ಗದ ಕಾಲ ಕ್ರಿ. ಶ. 850. ಇದರ ಮೇಲೆ ದಂಡಿಯ 'ಕಾವ್ಯಾದರ್ಶ'ದ ಪ್ರಭಾವವಿದೆ. ಆದ್ದರಿಂದ ದಂಡಿಯು ಇದಕ್ಕೆ ಹಿಂದಿನವನಿರಬಹುದೆಂದು ಹೇಳಲಾಗಿದೆ.

4) ಕ್ರಿ ಶ. 660 ರಲ್ಲಿ ಬದುಕಿದ್ದ ಕನ್ನಡ ಕವಯಿತ್ರಿ ವಿಜ್ಜಿಕೆಯು ದಂಡಿಯ ಹೆಸರನ್ನು ಉಲ್ಲೇಖಿಸಿದ್ದಾಳೆ. ಆದ್ದರಿಂದ ದಂಡಿಯು. ಇವಳಿಗಿಂತ ಹಿಂದಿನವನಾಗಿರಬೇಕೆಂದು ಹೇಳಬಹುದು.

5) 7 ನೇ ಶತಮಾನದ ಸೇನರಾಜನು ದಂಡಿಯಿಂದ ಸ್ಫೂರ್ತಿಗೊಂಡು 'ಸಿಯುಬಸ ಸುಲಕರ' ಗ್ರಂಥವನ್ನು ಸಿಂಹಳೀ ಭಾಷೆಯಲ್ಲಿ ಬರೆದನೆಂದು ಹೇಳಲಾಗಿದೆ. ಆದ್ದರಿಂದ ದಂಡಿ ಈತನಿಗಿಂತ ಹಿಂದಿನವನಾಗಿರಬೇಕು.

ಕೃತಿಗಳು : ರಾಜಶೇಖರ ಕವಿಯ 'ಶಾರ್ಙ್ಗಧರ ಪದ್ಧತಿ' ಯಲ್ಲಿ ಉಕ್ತವಾಗಿರುವಂತೆ --

' त्रयो दण्डिप्रबन्धाश्च त्रिषु लोकेषु विश्रुताः '

ಗಾರ್ಹಪತ್ಯಾದಿ ಅಗ್ನಿತ್ರಯಗಳಂತೆ, ಬ್ರಹ್ಮಾದಿ ತ್ರಿಮೂರ್ತಿಗಳಂತೆ, ಸತ್ವಾದಿಗುಣತ್ರಯಗಳಂತೆ ದಂಡಿಯದೂ ಮೂರೇ ಮೂರು ಪ್ರಬಂಧಗಳೆಂದು ಹೆಸರಿಸಲಾಗಿದೆ. 1) ದಶಕುಮಾರ ಚರಿತೆ 2) ಕಾವ್ಯಾದರ್ಶ ಮತ್ತು 3) ಅವಂತೀ ಸುಂದರೀ ಕಥೆ.

3. ಪದಗಳ ಅರ್ಥ : निष्फल: – ಮುದುಕ लता: – ಬಳ್ಳಿ

वदान्य – ಬಹಳ ದಾನಮಾಡುವವನು उदग्र: – ದೊಡ್ಡತನವುಳ್ಳವನು, ಉನ್ನತ ಶರೀರ ಉಳ್ಳವನು नदीष्ण–ಕುಶಲ नेदिष्ठ:– ಹತ್ತಿರದಲ್ಲಿರುವವನು पुरुषायुषम्–ಪೂರ್ಣ ವಯಸ್ಸು उच्छ्रित:–ಉನ್ನತ प्रसादवित्त: –ರಾಜನ ಅನುಗ್ರಹಕ್ಕೆ ಪಾತ್ರನೆಂದು ಪ್ರಸಿದ್ಧನಾದ आयातयामम्– ಮುಪ್ಪಡರದ, ಮುಪ್ಪಿಲ್ಲದ तन्त्रवाप:–तन्त्रं–ತನ್ನ ರಾಜ್ಯದ ಚಿಂತನೆ आवाप:–ಶತ್ರು ರಾಜ್ಯದ ಚಿಂತನೆ अन्ध:–ಅನ್ನ अक्षिगत:–ದ್ವೇಷಿಸುವ गवल:–ಕಾಡು ಕೋಣ धातुगण:–ಜಾರರು उपजाप:–ಒಡಕು वलोम– ಮೆಡುಳು निष्कुलाकृत्य– ಅವಯವಗಳನ್ನು ಬಿಡಿಸಿ कुशीलव: – ರಾಜನನ್ನು ಹೊಗಳುವವರು, ಹೊಗಳು ಭಟರು

ii) ಕಥೆಯ ಪಾತ್ರಪರಿಚಯ :

ಸೂ : ಈ ಕಥೆಯಲ್ಲಿ ಅಸಂಖ್ಯ ಪಾತ್ರಗಳಿವೆ ಮುಖ್ಯ ಪಾತ್ರಗಳ ಪರಿಚಯ ಈ ಮುಂದಿನಂತಿದೆ.

ಕ) ವಿಶ್ರುತ : ರಾಜಹಂಸ ಮಹಾರಾಜನಿಗೆ ತಾನು ಕಂಡ–ಅನುಭವಿಸಿದ–ಮಾಡಿದ ಸಾಹಸ ಕಾರ್ಯದ ವಿವರಣೆಯನ್ನು ನೀಡಿದ್ದಾನೆ.

ಖ) ಪುಣ್ಯವರ್ಮಾ : ವಿದರ್ಭ ದೇಶದ ಮಹಾಗುಣವಂತ, ಸಮರ್ಥ ರಾಜನೀತಿ ನಿಪುಣ, ವಿಖ್ಯಾತ ವಿದ್ವಾಂಸ, ಸರ್ವಪ್ರಶಂಸಾಪಾತ್ರಪ್ರಭು

ಗ) ಅನಂತವರ್ಮಾ : ಪುಣ್ಯವರ್ಮನ ಅವಿವೇಕಿ ಪುತ್ರ, ಸುಮಂತ್ರಿಗಳನ್ನು ಧಿಕ್ಕರಿಸಿದ, ಕುಮಂತ್ರಿಗಳ ಮಾತು ಕೇಳಿದ, ಹಾಳಾದ

ಘ) ವಿಹಾರಭದ್ರ : ಅನಂತವರ್ಮನ ಮಿತ್ರ, ಇವನ ಪತನಕ್ಕೆ ಕಾರಣನಾದವನು.

ಙ) ವಸುರಕ್ಷಿತ : ಪುಣ್ಯವರ್ಮನ ಮಂತ್ರಿ, ಅನಂತರ ಅನಂತವರ್ಮನ ಮಂತ್ರಿಯಾದ, ಅನಂತವರ್ಮನಿಗೆ ಅರ್ಥಶಾಸ್ತ್ರ, ದಂಡನೀತಿಯ ಮಹತ್ವವನ್ನು ಬೋಧಿಸಿದ, ಕಡೆಯ ಕಾಲದಲ್ಲಿ ಅನಂತವರ್ಮ ಹಾಳಾದಾಗ, ಈತನ ರಾಣಿ, ಮಗ, ಮಗಳನ್ನು ಕಾಪಾಡಿದ.

ಚ ) ಚಂದ್ರಪಾಲಿತ : ಅನಂತವರ್ಮನ ಶತ್ರು, ಅಶ್ಮಕರಾಜನ

ಮಂತ್ರಿ, ಇಂದ್ರಪಾಲಿತನ ಪುತ್ರ, ಅನಂತವರ್ಮನ ಪತನಕ್ಕೆ ಕಾರಣನಾದ

ಛ) ನಾಳೀಜಂಘ : ಅನಂತವರ್ಮನ ಮಗ, ಮಗಳು, ರಾಣಿಯನ್ನು ಕಾಪಾಡುವುದಕ್ಕೆ ಪ್ರಯತ್ನಿಸಿದವನು.

ಜ) ಭಾಸ್ಕರವರ್ಮ : ಅನಂತವರ್ಮನ ಮಗ

iii) ದಶಕುಮಾರ ಚರಿತೆಯಲ್ಲಿ ತಿಳಿಯುವ ಅಂಶ :

ತಿಳಿಯಿರಿ : ಮಹಾಕವಿ ದಂಡಿ ವಿರಚಿತ 'ದಶಕುಮಾರಚರಿತೆ' ಯಲ್ಲಿ ಕ್ರಮವಾಗಿ ಈ ಮುಂದಿನ ಹತ್ತು ಜನ ರಾಜಕುಮಾರರ ಕಥೆ ಉಕ್ತವಾಗಿದೆ : 1) ರಾಜವಾಹನ 2) ಅಪಹಾರವರ್ಮ 3) ಉಪಹಾರವರ್ಮ 4) ಮಿತ್ರಗುಪ್ತ 5) ಮಂತ್ರಗುಪ್ತ 6) ಅರ್ಥಪಾಲ 7) ವಿಶ್ರುತ 8) ಪುಷ್ಪೋದ್ಭವ 9) ಪ್ರಮತಿ ಮತ್ತು 10) ಸೋಮದತ್ತ ಈ ಎಲ್ಲರೂ ತಾವು ಕಂಡ, ಕೇಳಿದ, ಭೋಗಿಸಿದ, ಕಷ್ಟ, ಸುಖ, ನೋವು, ನಲಿವುಗಳು ಅದ್ಭುತ, ಮಹದದ್ಭುತ ರೀತಿಯಲ್ಲಿದ್ದವೆಂದು ಕಥೆಗಳ ರೂಪದಲ್ಲಿ ಬಣ್ಣಿಸಿದ್ದಾರೆ. ಈ ಎಲ್ಲವೂ ವಸ್ತುತಃ ಚೇತೋಹಾರಿಯಾಗಿ ಗ್ರಂಥದಲ್ಲಿ ಮೂಡಿಬಂದಿವೆ.

4. ಕಥಾಸಾರ ಮತ್ತು ಪ್ರಶ್ನೋತ್ತರ ಸಾಮಗ್ರಿ :

1) ರಾಜವಾಹನನನ್ನು ಹುಡುಕಿಕೊಂಡು ಹೊರಟಿದ್ದ ವಿಶ್ರುತನು ರಾಜಹಂಸನನ್ನು ಕುರಿತು ಹೀಗೆ ಹೇಳಿದನು : ವಿಂಧ್ಯಾಟವಿಗೆ ಬಂದೆನು ಅಲ್ಲಿ ಒಂದು ಬಾವಿಯಿತ್ತು ಬಾವಿಯ ಬಳಿ ಒಬ್ಬ ಬಾಲಕ ಛಾಯಾರಿ ಕುಳಿತಿದ್ದ. ನನ್ನನ್ನು ಕಂಡು ಅವನು ಹೇಳಿದ 'ನನಗೆ ನೀರೆತ್ತಿ ಕೊಡಲು ಹೋದ ವೃದ್ಧ ಕಾಲು ಜಾರಿ ಬಿದ್ದನು. ಅವನೇ ನನ್ನ ಆಧಾರ ಎಂದು, ಅವನನ್ನು ಮೇಲೆತ್ತಲು ಬೇಡಿಕೊಂಡ.

2) ನಾನು ಮುದುಕನನ್ನು ಮೇಲೆತ್ತಿ, ಕುಡಿಯಲು ನೀರು ಕೊಟ್ಟು, ಹಸಿವಿಗೆ ಹಣ್ಣು ಕಿತ್ತು ಕೊಟ್ಟೆ ನಂತರ ಅವರ ಬಗ್ಗೆ ಕೇಳಿದೆ ನೀವಾರು ಏಕೆ ಇಲ್ಲಿದ್ದೀರಿ ? ಎಂದು. ವೃದ್ಧ ತನ್ನ ಕಥೆ ಹೇಳ ತೊಡಗಿದ :

"ವಿದರ್ಭ ದೇಶದಲ್ಲಿ ಪುಣ್ಯವರ್ಮನೆಂಬ ಅರಸನಿದ್ದ. ಅವನು

ಪ್ರತಾಪಿ, ಸಮಸ್ತ ರಾಜನೀತಿ, ದಂಡನೀತಿ ವಿಶಾರದ, ಸಕಲಕಲಾ ನಿಪುಣ ದಾನಿ, ಉದಾರಿ ಹೀಗೆ ನೂರು ವರ್ಷ ಬಾಳಿ ಸ್ವರ್ಗಸ್ಥನಾದ."

3) ವಿದರ್ಭರಾಜ ಪುಣ್ಯವರ್ಮ ಕಾಲವಾದ ಮೇಲೆ, ಅವನ ಮಗ ಅನಂತವರ್ಮ ಪಟ್ಟಕ್ಕೆ ಬಂದ ಅವನೂ ತಂದೆಯಂತೆ ಸಕಲಗುಣ ಸಂಪನ್ನ. ಆದರೆ ಅವನಿಗೆ ರಾಜನೀತಿ ಜ್ಞಾನವಿರಲಿಲ್ಲ. ಮಂತ್ರಿಗಳಲ್ಲಿ ದುಷ್ಟರಿದ್ದರು ಶಿಷ್ಟರೂ ಇದ್ದರು. ಅನಂತವರ್ಮನ ಮೇಲೆ ದುರ್ಮಂತ್ರಿಗಳ ಪ್ರಭಾವ ಹೆಚ್ಚು. ವಸುರಕ್ಷಿತ ಪುಣ್ಯವರ್ಮನ ಮಂತ್ರಿ ಇವನಿಗೆ ಈ ರಾಜಕುಲದಲ್ಲಿ ಭಕ್ತಿನಿಷ್ಠೆಗಳಿದ್ದವು. ರಾಜನ ದುಷ್ಟಪ್ರಭಾವದಿಂದ ಮಂತ್ರಿ ದುಃಖಿತನಾದ.

ವಸುರಕ್ಷಿತನು ಏಕಾಂತದಲ್ಲಿ ಅನಂತವರ್ಮನನ್ನು ಕುರಿತು "ಮಗು, ನೀನು ಮಹಾಬುದ್ಧಿಶಾಲಿ, ಅರ್ಥಶಾಸ್ತ್ರವನ್ನು ತಿಳಿಯದಿದ್ದರೆ ಮಂತ್ರಿಗಳ ಕೂಟತಂತ್ರವನ್ನು ತಿಳಿಯಲಾಗುವುದಿಲ್ಲ. ಇದರಿಂದ ಪ್ರಜೆಗಳ ಅಪಮಾನಕ್ಕೆ ಗುರಿಯಾಗಬೇಕಾಗುತ್ತದೆ. ಅನಾಯಕತೆಯುಂಟಾಗುವುದು. ನೀತಿ ದೀಪದಿಂದ ಎಲ್ಲವೂ ಸುಗಮವಾಗುವುದು. ಅರ್ಥಶಾಸ್ತ್ರ ಚಕ್ಷುವಿನಿಂದ ಅಗೋಚರವಾದುದನ್ನು ತಿಳಿಯಬಹುದು. ಭೋಗದಲ್ಲೇ ಮೈಮರೆಯದೆ ಶಕ್ತಿತ್ರಯವನ್ನು ಅನುಷ್ಠಾನಕ್ಕೆ ತಂದು ಚಿರಕಾಲ ಆಳು" ಎಂದನು.

4) ಅನಂತವರ್ಮನು, ವಸುರಕ್ಷಿತನ ಬೋಧನೆಯನ್ನು ನಡೆಸಲು ನಿಶ್ಚಯಿಸಿದ ಇದು ಇವನ ಬಾಲ್ಯಮಿತ್ರ ವಿಹಾರಭದ್ರನಿಗೆ ತಿಳಿಯಿತು. ಅವನು ಕುಹಕಿ, ಒಡೆಯನಿಗೆ ತಕ್ಕಂತೆ ನಡೆಯುವವನು, ಗೀತವಾದ್ಯನೃತ್ಯಗಳಲ್ಲಿ ನಿಪುಣ, ಪರನಿಂದಕ, ಲಂಚಕೋರ, ದುಶ್ಚಟಗಳ ನಿಧಿ, ಪರಮರ್ಮ ಭೇದಕ, ದುರ್ನಯ ಶಿಕ್ಷಕ, ಮಾತಿನ ಮೋಡಿಯಿಂದ ಮರುಳುಮಾಡಬಲ್ಲ.

5) ವಿಹಾರಭದ್ರನು ತನ್ನ ವಾಗ್ಜಾಲವನ್ನು ಅನಂತವರ್ಮನ ಮೇಲೆ ಬೀಸಿದನು, "ಒಡೆಯ, ಧೂರ್ತರು ಪರಲೋಕದ ಆಸೆ ಹುಟ್ಟಿಸಿ ಅನೇಕ ಕಷ್ಟತರವಾದ ನಿಯಮಗಳನ್ನು ಬೋಧಿಸುತ್ತಾರೆ. ಮೂಢರಾಜ ಮರುಳಾಗಿ ನಿಯಮಗಳಲ್ಲೇ ಮುಪ್ಪಾಗುತ್ತಾನೆ. ಶಾಸ್ತ್ರದಲ್ಲಿ ಹೇಳಿರುವುದು– ಹೆಂಡತಿ, ಮಕ್ಕಳನ್ನೂ ನಂಬಕೂಡದು. ಅನ್ನಕ್ಕೆ ಇಷ್ಟೇ ಅಕ್ಕಿ ಬೇಕು,

ಇಷ್ಟು ಅಕ್ಕಿ ಬೇಯಿಸಲು ಇಷ್ಟೇ ಸೌದೆ ಬೇಕು, ಇಷ್ಟೇ ಅನ್ನ ತಿನ್ನಬೇಕು, ಪ್ರತಿಯೊಂದನ್ನೂ ಅಳತೆ ಮಾಡಿ ಬಳಸಬೇಕು.

ಅರಸನ ದಿನಚರ್ಯೆ : ಮೊದಲ ಜಾವದಲ್ಲಿ ಮುಖ ತೊಳೆಯಲು ಮುಂಚೆ ಆಯುವ್ಯಯ ಪರಿಶೀಲನೆ, ಎರಡನೇ ಯಾಮದಲ್ಲಿ ವಾದವಿವಾದ ನಿರ್ಣಯ, ಮೂರನೇ ಯಾಮದಲ್ಲಿ ಸ್ನಾನ ಭೋಜನ, ನಾಲ್ಕನೇ ಯಾಮದಲ್ಲಿ ಕಾಣಿಕೆ ಸ್ವೀಕಾರ, ಐದನೇ ಯಾಮವಲ್ಲಿ ಮಂತ್ರಾಲೋಚನೆ, ಆರನೇ ಯಾಮ ವಿಹಾರಗಳಿಗೆ, ಏಳನೇ ಯಾಮ ಬಲ ಪರ್ಯವೇಕ್ಷಣೆ, ಎಂಟನೇ ಯಾಮದಲ್ಲಿ ದಿಗ್ವಿಜಯ ವಿನಿಮಯ ಕ್ಲೇಶ. ಇಷ್ಟು ಮುಗಿಯುವ ವೇಳೆಗೆ ಸಂಧ್ಯಾಕಾಲ. ಸಂಧ್ಯಾವಂದನಾದಿಗಳನ್ನು ತೀರಿಸಿ, ಮೊದಲ ಯಾಮದಲ್ಲಿ ಗೂಢಪುರುಷರ ಸಂದರ್ಶನ, ಎರಡನೇ ಯಾಮದಲ್ಲಿ ಊಟ, ಮೂರನೇ ಯಾಮದಲ್ಲಿ ಮಲಗಬೇಕು, ನಾಲ್ಕು, ಐದನೆಯ ಯಾಮದಲ್ಲಿ ನಿದ್ರೆ. ಆರನೇ ಯಾಮದಲ್ಲಿ ಶಾಸ್ತ್ರಚಿಂತೆಕಾರ್ಯಚಿಂತೆ, ಏಳನೇ ಯಾಮದಲ್ಲಿ ರಾಜಕಾರ್ಯದ ನಿಮಿತ್ತ ಮಂತ್ರಿಗಳು ನೀಡುವ ಸೂಚನೆಗಳನ್ನು ಕೇಳಬೇಕು, ಎಂಟನೇ ಯಾಮದಲ್ಲಿ ಪುರೋಹಿತರು ಇಲ್ಲಸಲ್ಲದ ಶಕುನ ಭಯ ಹುಟ್ಟಿಸಿ ಕಲ್ಯಾಣಪ್ರಾಪ್ತಿಗಾಗಿ ಹೋಮಾದಿ ಕಾರ್ಯಗಳಿಗೆ ಪ್ರೇರಿಸುತ್ತಾರೆ.

ಒಂದಿಷ್ಟೂ ನೆಮ್ಮದಿಯಿಲ್ಲದ ರಾಜ ಶಾಸ್ತ್ರಜ್ಞರ ಉಪದೇಶಕ್ಕೆ ಕಿವಿಗೊಟ್ಟು ರಾಜ್ಯವನ್ನು ರಕ್ಷಿಸಲಾರದೆ ಜನರ ಸಂಶಯಕ್ಕೂ ಗುರಿ ಆಗುವನು. ರಾಜ್ಯಭಾರವನ್ನು ವಿಶ್ವಾಸಿಗಳಿಗೆ ಒಪ್ಪಿಸಿ ಅಂತಃಪುರದಲ್ಲಿ ಅಪ್ಸರೆಯಂತಿರುವ ಚೆಲುವೆಯರೊಡನೆ ವಿಹರಿಸು ಎಂದು ದೀರ್ಘವಾಗಿ ಬೋಧಿಸಿದನು. ರಾಜನು ಅವನ ಉಪದೇಶಕ್ಕೆ ಮರುಳಾಗಿ ಆವನನ್ನು ಗುರುವೆಂದು ಒಪ್ಪಿ ಪ್ರೀತಿಯಿಂದ ಅಪ್ಪಿಕೊಂಡನು.

ವಿಹಾರಭದ್ರನ ಉಪದೇಶ ವೈಖರಿಯನ್ನು ಕಣ್ಣಾರೆ ಕಂಡು ಕಿವಿಯಾರೆ ಕೇಳಿದ ಅಂತಃಪುರ ಪ್ರಮದೆಯರು ಆನಂದಪರವಶರಾಗಿ ಕಣ್ಣರಳಿಸಿ ನಗು ಸೂಸಿದರು.

ವಸುರಕ್ಷಿತನ ಉಪದೇಶದಲ್ಲಿ ಪರಿಶ್ರಮ ಹೆಚ್ಚು ; ಆಯಾಸ ಅತಿ ;

ಸುಖ ಕಡಿಮೆ ಆದರೆ ವಿಹಾರಭಪ್ರನ. ಉಪದೇಶದಲ್ಲಿ ಭೋಗ ಅತಿಶಯತೆ ಯಲ್ಲಿತ್ತು ; ಆನಂದ-ಸಂತೋಷವಿತ್ತು. ಆಪ್ಯಾಯನಕಾರಿಯಾದ ಗುರೂ ಪದೇಶವನ್ನು ಅನಂತವರ್ಮ ವಿಧೇಯನಾಗಿ ಪಾಲಿಸತೊಡಗಿ ಅಲಸನಾದ.

6) ಅನಂತವರ್ಮನ ಅವಜ್ಞೆಯನ್ನು ಕಂಡ ವಸುರಕ್ಷಿತನಿಗೆ ಪರಿಸ್ಥಿತಿ ತಿಳಿಯಿತು. ಅವನೀಗ ಮೊದಲಿನಂತಿಲ್ಲ, ಅವನಿಗೆ ಈಗ ನನ್ನ ಮಾತು ರುಚಿಸುತ್ತಿಲ್ಲ. ಗೃಹಕೃತ್ಯಗಳಲ್ಲಿ ಆಸಕ್ತಿಯಿಲ್ಲ, ಗಹನಕಾರ್ಯದಲ್ಲಿ ನನ್ನ ಸಹ ಕಾರ ಬೇಕಾಗಿಲ್ಲ, ಈಗ ನನ್ನ ಸ್ಥಾನ ಅನ್ಯರಿಗೆ ಸೇರಿದೆ, ನನ್ನ ವೈರಿಗಳಲ್ಲೇ ಅವನಿಗೆ ವಿಶ್ವಾಸ, ಅವನಿಗೆ ಸಮ್ಮತವಾದದ್ದನ್ನೇ ಹೇಳಿದರೂ ತಿರಸ್ಕರಿಸು ತ್ತಾನೆ. "ಅರಸನ ಮನಸ್ಸಿನಂತೆ ನಡೆದುಕೊಳ್ಳುವ ಮಂತ್ರಿಗಳು ದುಷ್ಟ ರಾದರೂ ಅವರು ಅರಸನ ಅನುಗ್ರಹಕ್ಕೆ ಪಾತ್ರರಾಗುತ್ತಾರೆ. ಮೇಧಾವಿ ಗಳೂ ನ್ಯಾಯಸಂಧರೂ ಆದ ಮಂತ್ರಿಗಳು ಸರಳರಾದರೂ ಅರಸನಿಗೆ ಅನುಕೂಲರಾಗಿಲ್ಲದೆ ಹೋದರೆ, ಅವನ ಆಗ್ರಹಕ್ಕೆ ಗುರಿಯಾಗುತ್ತಾರೆ

ಈ ಅರಸ ಅವಿನೀತ, ಆದರೂ ಈತನನ್ನು ಬಿಟ್ಟು ಹೋಗುವ ಹಾಗಿಲ್ಲ. ಇವನ ಪಿತೃಪಿತಾಮಹರ ಕಾಲದಿಂದಲೂ ನಾನಿಲ್ಲಿ ಸೇವೆ ಮಾಡಿ ಕೊಂಡಿದ್ದೇನೆ. ಇವನಿಗೆ ಅಪಾಯ ಕಟ್ಟಿಟ್ಟಿದೆ. ಹೇಗಾದರೂ ಬಾಯಿ ಮುಚ್ಚಿಕೊಂಡು ಏನೇ ಆದರೂ ಇಲ್ಲಿಯೇ ಅಂಟಿಕೊಂಡಿರುತ್ತೇನೆ ಎಂದು ತೀರ್ಮಾನಿಸಿಕೊಂಡು ಸುಮ್ಮನಾದ.

7) ಅಶ್ಮಕರಾಜನ ಮಂತ್ರಿ ಇಂದ್ರಪಾಲಿತನ ಮಗ ಚಂದ್ರಪಾಲಿತ ತನ್ನ ತಂದೆಯಿಂದ ಹೊರದೂಡಲ್ಪಟ್ಟು ಗಾಯಕರಿಂದ, ನರ್ತಕಿಯರಿಂದ ಮತ್ತು ಗೂಢಚಾರರಿಂದ ಕೂಡಿ ವಿದರ್ಭ ದೇಶಕ್ಕೆ ಬಂದ. ಚಂದ್ರಪಾಲಿತ ಅನಂತ ವರ್ಮನನ್ನು ಬಲೆಗೆ ಎಳೆದುಕೊಂಡ. ರಾಜ ಯಾವ ವಿಹಾರದಲ್ಲಿ ಆಸಕ್ತ ನೆಂಬುದನ್ನು ತಿಳಿದು ಅದರಲ್ಲೇ ಮಗ್ನನನ್ನಾಗಿ ಮಾಡಿ ಅವುಗಳನ್ನೇ ಹೊಗಳತೊಡಗಿದ. ಬೇಟೆಯಾಡುವುದನ್ನು ಹೊಗಳಿದ – ಬೇಟೆಯಾಡು ವುದರಿಂದ ಆರೋಗ್ಯ ಹೆಚ್ಚುವುದು, ಉತ್ಸಾಹ ಹೆಚ್ಚುವುದು ದುಷ್ಟ ಪ್ರಾ ಣಿಗಳ ಸಂಹಾರದಿಂದ ಪ್ರಜೆಗಳಿಗೆ ಕ್ಷೇಮವುಂಟಾಗುವುದು.

ರಾಜ ದ್ಯೂತವ್ಯಾತ್ತಿಡುದ್ದರೆ ಚಂದ್ರಪಾಲಿತ ಜೂಜನ್ನೇ ಹೊಗಳಿತ್ತು ಉದಾರತೆ, ಸಮಚಿತ್ತತೆ, ಏಕಾಗ್ರತೆ, ಕೂಟಕರ್ಮಸೂಕ್ಷ್ಮಗಳ ಪರಿಜ್ಞಾನ ಉಂಟಾಗುತ್ತದೆ ಇದರಿಂದ ಆತ್ಮಾಭಿಮಾನ ಕೆರಳಿ ಜೀವನ ಸುಗಮ ಎಂದ

ಉತ್ತಮಾಂಗನೆಯರ ಒಡನಾಟದಿಂದ ಧರ್ಮಾರ್ಥಗಳು ಸಿದ್ಧಿಸುವುವು. ಇನಿಯಳ ಸಂತೋಷಕ್ಕಾಗಿ ಉಡುಗೆ ತೊಡುಗೆಗಳಿಂದ ಅಲಂಕೃತರಾಗುತ್ತೇವೆ. ಇದರಿಂದ ಲೋಕದ ಗೌರವಕ್ಕೆ ಪಾತ್ರರಾಗುತ್ತೇವೆ. ಮಿತ್ರರಲ್ಲಿ ಸೌಹಾರ್ದ, ಪರಿಜನರಲ್ಲಿ ಆದರ, ಮಧುರವಾಣಿ, ದಾಕ್ಷಿಣ್ಯ ವರ್ತನೆ, ಶ್ರೇಯಸ್ಸಾಧಕವಾದ ಸಂತತಿ ಲಾಭ ಇತ್ಯಾದಿ ಲಾಭಗಳಾಗುವುವು

ಪಾನವನ್ನು ಇನ್ನೂ ಹೆಚ್ಚಾಗಿ ಹೊಗಳಿದ. ಇದು ರೋಗಹರ, ಪಾನದಿಂದ ಯೌವನ ಕಂಗೊಳಿಸುವುದು, ಸಂಕಟ ಪರಿಹಾರ, ಆತ್ಮವಿಶ್ವಾಸ ಮದ್ಯವನ್ನು ಹಂಚುವುದರಿಂದ ಮಿತ್ರವರ್ಗ ವಿಸ್ತಾರವಾಗುವುದು.

8) ಚಂದ್ರಪಾಲಿತನ ದುರುಪದೇಶವನ್ನು ಅನಂತವರ್ಮನು ಗುರೂಪದೇಶದಂತೆ ಆದರಿಸಿದ. ಪ್ರಜೆಗಳು ಇವನ ಮೇಲ್ಪಂಕ್ತಿಯನ್ನೇ ಅನುಸರಿಸಿದರು. ರಾಜಧನವನ್ನು ಎಲ್ಲರೂ ನುಂಗತೊಡಗಿದರು. ರಾಜ್ಯದ ಆದಾಯ ಕುಗ್ಗಿತು, ವ್ಯಯ ಹೆಚ್ಚಿತು. ಹೆಂಗಸರೂ ಗಂಡಸರೂ ಅಭ್ಯಾಗತರೂ ಮನಬಂದಂತೆ ನಡೆಯುವವರಾದರು. ತಸ್ಕರರು ಧನಿಕರ ಧನವನ್ನು ದೋಚಿದರು. ಕೊಲೆ, ಸುಲಿಗೆ, ಕಳವುಗಳೇ ಮೊದಲಾದ ಅರಿಷ್ಟಗಳು ಹೆಚ್ಚಿ ದರಿದ್ರತೆ, ಅನ್ಯಾಯ, ದುಷ್ಕೃತ್ಯ ಎಲ್ಲೆಲ್ಲೂ ಹರಡಿತು.

ದುಃಸ್ಥಿತಿ ವಿದರ್ಭರಾಜ್ಯದಲ್ಲಿ ನಾಲ್ಕೂ ಕಡೆ ಹರಡಿದ ಮೇಲೆ ಗೂಢಚಾರರು ಅನಂತವರ್ಮನ ಯೋಧಾಗ್ರೇಸರರನ್ನು - ಅನೇಕ ರೀತಿ ಬೇಟೆ, ವಿಷಪ್ರಾಶನ. ಹಸಿವು, ಜಾಯಮಾರಿಕೆ, ರೋಗಗಳು ನಾನಾ ಬಗೆಯ ದುಷ್ಟ ವಿಧಾನಗಳಿಂದ ಕೊಂದರು. ಹೀಗೆ ವಿದರ್ಭರಾಜ್ಯದ ಸೈನ್ಯರಾಶಿ ಜರ್ಜರಿತವಾಯಿತು.

1) ವಿಶ್ರುತನು ಯಾರು ? ಇವನು ವಿಂಧ್ಯಾಟವಿಗೆ ಏಕೆ ಬಂದ ? ಅಲ್ಲಿ ಯಾರನ್ನು ಕಂಡ ? ಕಣ್ಣಿಂದ ಕಂಡ ವ್ಯಕ್ತಿ ಇವನಿಗೆ ಏನು ಹೇಳಿದ ?

ಉತ್ತರ : 1 ನೇ ಭಾಗ ಬರೆಯಿರಿ

2) ವಿಶ್ರುತನಿಗೆ ವೃದ್ಧನು ಹೇಳಿದ ವಿದರ್ಭ ದೇಶದ ಪುಣ್ಯವರ್ಮರಾಜನ ಗುಣಾತಿಶಯಗಳು ಯಾವುವಾಗಿದ್ದುವು ?

ಉತ್ತರ : 2 ನೇ ಭಾಗ ಬರೆಯಿರಿ

3) ಅನಂತವರ್ಮ, ವಸುರಕ್ಷಿತ ಯಾರು ? ವಸುರಕ್ಷಿತ ಅನಂತ-ವರ್ಮನಿಗೆ ಶಾಸ್ತ್ರ ದಂಡನೀತಿ ಬಗೆಗೆ ಹೇಳಿದ ಉಪದೇಶವೇನು ?

ಉತ್ತರ : 3 ನೇ ಭಾಗ ಬರೆಯಿರಿ

4) ಅನಂತವರ್ಮನ ಮಿತ್ರ ವಿಹಾರಭದ್ರ ಎಂಥ ಸ್ವಭಾವದವನು ?

ಉತ್ತರ : 4 ನೇ ಭಾಗ ಬರೆಯಿರಿ

5) i) ವಿಹಾರಭದ್ರನು ಯಾರು ? ಇವನು ಅನಂತವರ್ಮನಿಗೆ ಕೊಟ್ಟ ಉಪದೇಶವೇನು ?

ii) ವಿಹಾರಭದ್ರನ ಅಭಿಪ್ರಾಯದಂತೆ ಅರ್ಥ – ದಂಡನೀತಿಯನ್ನು ಅಧ್ಯಯನ ಮಾಡಿದ ಅರಸನು ಹೇಗೆ ಕಾರ್ಯದಲ್ಲಿ ನಿರತನಾಗುತ್ತಾನೆ ?

iii) ಅಂತಃಪುರದ ಪ್ರಮದೆಯರು ಆನಂದಪರವಶರಾದ ಸಂದರ್ಭ ಯಾವುದು ಮತ್ತು ಏಕೆ ಆನಂದಿತರಾದರು ?

iv) ಅನಂತವರ್ಮನು ವಿಹಾರಭದ್ರನನ್ನು ನೀನು ನನ್ನ ಗುರು ವೆಂದು ಏಕೆ ಹೇಳಿದನು ?

v) ವಸುರಕ್ಷಿತನ ಮಾತು, ಉಪದೇಶಗಳು ಅನಂತವರ್ಮನಿಗೆ ಏಕೆ ಹಿಡಿಸಲಿಲ್ಲ ? ಇದರ ಪರಿಣಾಮವೇನಾಯಿತು ?

vi) ವಸುರಕ್ಷಿತನ ಉಪದೇಶವೆಲ್ಲ (ಅನಂತವರ್ಮನಿಗೆ ಮಾಡಿದ್ದ) ಕೋಣನ ಮುಂದೆ ಬಾರಿಸಿದ ಕಿನ್ನರಿಯಂತಾದುದು ಏಕೆ

ಉತ್ತರ : 5 ನೇ ಭಾಗ ಬರೆಯಿರಿ

6) ಅನಂತವರ್ಮನು ತನ್ನ ಉಪದೇಶವನ್ನು ಕಡೆಗಣಿಸಿದಾಗ ವಸುರಕ್ಷಿತನ ಮನದಲ್ಲಿ ನಡೆದ ತುಮುಲವೇನು ?

ಉತ್ತರ : 6 ನೇ ಭಾಗವನ್ನು ಬರೆಯಿರಿ

7) i) ಚಂದ್ರಪಾಲಿತ ಯಾರು ? ಇವನಿಗೆ ಅನಂತವರ್ಮನ ಸ್ನೇಹ ದೊರೆತುದು ಹೇಗೆ ? ಇವನು, ಉಪದೇಶಿಸಿದ ಬೇಟೆ, ಜೂಜು, ಸ್ತ್ರೀ ಸಂಸರ್ಗ, ಮದ್ಯಪಾನಾದಿಗಳ ವಿಷಯಗಳೇನು ?

ii) "ಚಂದ್ರಪಾಲಿತನು ವ್ಯವಹಾರ ಕುಶಲ, ಉಪದೇಶನಿಪುಣ, ಮಾತುಗಾರಿಕೆಯಲ್ಲಿ ವಿಹಾರಭದ್ರನಿಗಿಂತ ಚತುರ" ಹೌದೆ ? ವಿಚಾರಮಾಡಿ

ಉತ್ತರ : 7 ನೇ ಭಾಗ ಬರೆಯಿರಿ

8) ಅಶ್ಮಕರಾಜನ ಕಡೆಯವರು ವಿದರ್ಭರಾಜ್ಯದಲ್ಲಿ ಯಾವ ಯಾವ ವಿಧದಲ್ಲಿ ಕ್ಷೋಭೆಯನ್ನುಂಟುಮಾಡಿದರು ? ವಿದರ್ಭ ರಾಜ್ಯವನ್ನು ಯಾವ ಯಾವ ವಿಧಾನದಿಂದ ನಾಶ ಮಾಡಿದರು ?

ಉತ್ತರ : 8 ನೇ ಭಾಗ ಬರೆಯಿರಿ

9) ಭಾಸ್ಕರವರ್ಮ, ಮಂಜುವಾದಿನಿ, ವಸುಂಧರಾರಾಣಿ ಯಾರು ಯಾರು ? ಇವರ ಪರಿಚಯ ಮಾಡಿಕೊಡಿ.

ಅನಂತವರ್ಮನ ರಾಣಿ ವಸುಂಧರಾರಾಣಿ, ಕೋಶಲರಾಜನಾದ ಕುಸುಮಧನ್ವನ ಮಗಳು. ಭಾಸ್ಕರವರ್ಮ ಮತ್ತು ಮಂಜುವಾದಿನಿಯರು ಅನಂತವರ್ಮ-ವಸುಂಧರಾರಾಣಿಯರ ಮಕ್ಕಳು. ಮುಂದೆ ಭಾಸ್ಕರವರ್ಮನು, ತನ್ನ ತಂದೆ ಅನಂತವರ್ಮನ ಸಿಂಹಾಸನವನ್ನು ಪಡೆದನು. ಈ ಪವಿತ್ರ ಕಾರ್ಯಸಂಪಾದನೆಯಲ್ಲಿ ವಿಶ್ರುತನು ಬಹುವಾಗಿ ಶ್ರಮಿಸಿದನು. ಭಾಸ್ಕರವರ್ಮನೇ ನಾಳೀಜಂಘನ ಜೊತೆ ಬಾವಿಯ ಬಳಿ ಕುಳಿತು ಬಾಯಾರಿ ತೊಳಲುತ್ತಿದ್ದನು. ವಿಶ್ರುತನು, ಇವನಿಗೆ ನೀರು ಕುಡಿಸಿ ಬದುಕಿಸಿದನು. ಈ ನಾಳೀಜಂಘನೇ ಬಾವಿಯಲ್ಲಿ ಬಿದ್ದ ವೃದ್ಧನು.

[ ಸೂಚನೆ : ಮುಂದಿನ ಕಥಾಭಾಗವನ್ನು ಕೈಬಿಡಲಾಗಿದೆ. ವಿದ್ಯಾರ್ಥಿಗಳೇ ಅಧ್ಯಯನ ಮಾಡಲು ಸೂಚಿಸಲಾಗಿದೆ. ಇದು ಅಷ್ಟು ಮುಖ್ಯಾಂಶವಲ್ಲ. ಇದು ನಮ್ಮ ಅಭಿಪ್ರಾಯ. ]

* * * * *

## ಅನುಬಂಧ :

### ( ಸವಿಸ್ತರ ಪಠ್ಯಪುಸ್ತಕದ ಭಾಗ )

ಛಂದಸ್ಸಿನ ಸ್ವರೂಪ : ತಿಳಿಯಿರಿ : ಗುರು-ಲಘುವನ್ನು ಕಂಡು ಕೊಳ್ಳುವುದು, ಅರ್ಥಮಾಡಿಕೊಂಡು ಗುರು-ಲಘುವನ್ನು ಗುರುತು ಮಾಡುವುದು- ಈ ಎರಡನ್ನು ಅರಿತಲ್ಲಿ ಛಂದಸ್ಸಿನ ಪ್ರಶ್ನೆಗೆ ಸುಲಭವಾಗಿ ಉತ್ತರಿಸಬಹುದು.

ಲಘು-ಗುರು : [ ಸೂಚನೆ : ಪಠ್ಯಪುಸ್ತಕದ 110-111 ನೇ ಪುಟಸಂಖ್ಯೆಯ ಈ ಭಾಗವನ್ನು ಅಧ್ಯಯನ ಮಾಡಿ ]

### 1 ಛಂದಸ್ಸು

1) अनुष्टुप्- 'ರಾಮಾಯಣ', 'ಮಹಾಭಾರತ'ಗಳಿಂದ ಆರಿಸ ಲಾದ ಶ್ಲೋಕಗಳು ಈ ಛಂದಸ್ಸಿನಲ್ಲಿವೆ.

2) उपजातिः- 'ರತ್ನಂ ಸಮಾಗಚ್ಛತಿ ಕಾಂಚನೇನ,' 'ಭಸ್ಮಾವ ಶೇಷಂ ಮದನಂ ಚಕಾರ,' ಈ ಭಾಗದ ಶ್ಲೋಕಗಳು ಉಪಜಾತಿಯಲ್ಲಿವೆ.

3) वसन्ततिलका- 'ಸುಭಾಷಿತಾನಿ' 9 ಮತ್ತು 14 ನೇ ಶ್ಲೋಕ ಗಳು ಈ ಛಂದಸ್ಸಿನಲ್ಲಿವೆ.

4) मालिनी- 'ರತ್ನಂ ಸಮಾಗಚ್ಛತಿ ಕಾಂಚನೇನ ಕಾಂಚನೇನ' ಭಾಗದ ಕೊನೆಯ ಶ್ಲೋಕ ಈ ಛಂದಸ್ಸಿನಲ್ಲಿದೆ.

5) शिखरिणी- 'ಸುಭಾಷಿತಾನಿ' ಭಾಗದ 7, 10 ಮತ್ತು 12 ನೇ ಶ್ಲೋಕ ಈ ಛಂದಸ್ಸಿನಲ್ಲಿವೆ.

6) शार्दूलविक्रीडितम्- 'ಸುಭಾಷಿತಾನಿ' ಭಾಗದ 6 ಮತ್ತು 13 ನೇ ಶ್ಲೋಕಗಳು ಈ ಛಂದಸ್ಸಿನಲ್ಲಿವೆ.

7) स्रग्धरा- 'ಸುಭಾಷಿತಾನಿ' ಭಾಗದ 11 ನೇ ಶ್ಲೋಕವು ಈ ಛಂದಸ್ಸಿನಲ್ಲಿದೆ.

## 2 ಅಲಂಕಾರ

1) दृष्टान्तः– 'ಸ ತಿಷ್ಠತು ಪುರೇ ಮಮ' ಪಾಠದ 6 ನೇ ಶ್ಲೋಕದಲ್ಲಿ ಈ ಅಲಂಕಾರವಿದೆ.

2) निदर्शना– 'ರತ್ನಂ ಸಮಾಗಚ್ಛತಿ ಕಾಂಚನೇನ' ಶ್ಲೋಕ ಭಾಗದಲ್ಲಿ 'कुलेन कान्त्या...' ಶ್ಲೋಕದಲ್ಲಿ ಈ ಅಲಂಕಾರವಿದೆ.

3) अपह्नुतिः– 'ಸ ತಿಷ್ಠತು ಪುರೇ ಮಮ' ಪಾಠದ 8 ನೇ ಶ್ಲೋಕದಲ್ಲಿ ಈ ಅಲಂಕಾರವಿದೆ.

4) उत्प्रेक्षा– 'ರತ್ನಂ ಸಮಾಗಚ್ಛತಿ ಕಾಂಚನೇನ' ಶ್ಲೋಕಭಾಗದಲ್ಲಿ 'तया स्रजा वरेण्यः' ಎಂಬಲ್ಲಿ ಮತ್ತು 'ತಾಜಮಹಲ್' ಶ್ಲೋಕ ಭಾಗದ 2 ರಲ್ಲಿ ಈ ಅಲಂಕಾರವಿದೆ.

5) दीपकम्– 'ಸುಭಾಷಿತಾನಿ' ಭಾಗದ 10 ನೇ ಶ್ಲೋಕದಲ್ಲಿ **शाणोल्लीढः मणिः, हेतिदलितः समरविजयी**– ಇವು ಅಪ್ರಸ್ತುತಗಳು, **अर्थिषु गलितविभवाः नराः**– ಇದು ಪ್ರಸ್ತುತ.

6) आक्षेप– 'ಸುಭಾಷಿತಾನಿ' ಭಾಗದ 'क्षान्तिश्चेत् वचनेन किम्' ಎಂಬಲ್ಲಿ ಮತ್ತು 'ಗಂಗಾಸ್ತವ'ದ 3 ನೇ ಶ್ಲೋಕದಲ್ಲಿ ಈ ಅಲಂಕಾರವಿದೆ.

7) व्यतिरेक– ಈ ಅಲಂಕಾರವು, 'ಗಂಗಾಸ್ತವ'ದ 7ನೇ ಶ್ಲೋಕ ಮತ್ತು ರಮ್ಯತಾ ಶ್ಲೋಕ ಭಾಗದ 3 ನೇ ಶ್ಲೋಕದಲ್ಲಿ ಪ್ರಯುಕ್ತವಾಗಿದೆ

8) समुच्चयः– 'ಸುಭಾಷಿತಾನಿ' ಶ್ಲೋಕ ಭಾಗದ 9 ನೇ ಶ್ಲೋಕದಲ್ಲಿ ಈ ಅಲಂಕಾರವಿದೆ.

9) मालारूपकम्– 'ಗಂಗಾಸ್ತವ'ದ ಶ್ಲೋಕದಲ್ಲಿ ಈ ಅಲಂಕಾರವಿದೆ.

## 3 ನ್ಯಾಯಗಳು ಮತ್ತು ಗಾದೆಯ ಮಾತುಗಳು

क) 1) अपेयेषु तडागेषु बहुतरं उदकं भवति ।

ಇಲ್ಲಿ ಜಿಪುಣಧನಿಕನಲ್ಲಿರುವ ಹಣದ ನಿಷ್ಕ್ರಿಯತೆಯನ್ನು ಎತ್ತಿ ಹೇಳಲಾಗಿದೆ.

2) अहिरेव अहेः पादान् विजानाति—

ಕಳ್ಳನ ಹೆಜ್ಜೆಯ ಗುರುತು ಕಳ್ಳನಿಗೇ ತಿಳಿಯುತ್ತದೆಂಬಂತೆ ಹಾವಿನ ಹೆಜ್ಜೆ ಹಾವಿಗೇ ಗೊತ್ತು. ಸ್ವಭಾವತಃ ಸರಳತನವಿರುವ ವ್ಯಕ್ತಿ ದುರುಳರ ದುರುಳತನವನ್ನು ಅರಿಯಲಾರನು.

3) पिपीलिकागतिन्यायः —

ಇರುವೆಯು ಸಣ್ಣ ಅದು ಒಂದೇ ಸಮನೆ ಹೋಗುತ್ತಾ ಬಹಳ ದೂರಕ್ಕೂ ನಡೆಯಬಲ್ಲದು.

4) अन्धपरम्परान्यायः —

ಕುರುಡನು ಕುರುಡನನ್ನೇ ಅನುಸರಿಸುವುದಾಗಬಾರದು. ಹಾಗಾದರೆ ಈರ್ವರೂ ಕೂಪದಲ್ಲಿ ಕಾಲಿಟ್ಟು ಹಾಳಾಗುತ್ತಾರೆ.

5) प्रारब्धमुत्तमगुणा न परित्यजन्ति—

ಮಹತ್ವಾಕಾಂಕ್ಷಿಗಳು ಮಾತ್ರ ಮಹತ್ಕಾರ್ಯವನ್ನು ಸಾಧಿಸುತ್ತಾರೆ.

6) सम्पूर्णकुम्भः न करोति शब्दम् —

ತುಂಬಿದ ಕೊಡ ತುಳುಕುವುದಿಲ್ಲ.

7) आम्राश्च सिक्ताः, पितरश्च तृप्ताः —

ಮಾವಿನಮರದ ಬುಡದಲ್ಲಿ ಮಾಡುವ ಪಿತೃತರ್ಪಣ ಕಾರ್ಯದಿಂದ ಎರಡು ಫಲಸಿದ್ಧಿಯುಂಟಾಗುತ್ತದೆ. ಮಾವಿನಮರಕ್ಕೆ ನೀರೆರೆದಂತಾಗುತ್ತದೆ ಪಿತೃಗಳಿಗೆ ತರ್ಪಣಮಾಡಿದಂತಾಗುತ್ತದೆ

ख) 1) अन्धदर्पणन्यायः—

ಕುರುಡನಿಗೆ ಕನ್ನಡಿಯಿಂದ ಪ್ರಯೋಜನವಿಲ್ಲವು.

2) अरण्यरुदितन्याय:—
ನಿರ್ಜನವಾದ ಕಾಡಿನಲ್ಲಿ ಅತ್ತರೆ ಪ್ರಯೋಜನವಿಲ್ಲ.

3) भिक्षुपादप्रसरणन्याय:—
ಬೆರಳು ತೋರಿದರೆ ಹಸ್ತ ನುಂಗಿದಂತಾಗುತ್ತದೆ.

4) मण्डूकतोलनन्याय: —
ಕಪ್ಪೆಗಳನ್ನು ತಕ್ಕಡಿಯಿಂದ ತೂಗಲಾಗುವುದಿಲ್ಲ. 'ಕಪ್ಪೆತಕ್ಕಡಿ'

5) इतो व्याघ्र: इतस्तटी —
ಇತ್ತ ಹುಲಿ ಅತ್ತ ದರಿ ಎಂಬಂತಿದೆ

6) भक्षितेऽपि लशुने न शान्तो व्याधि: —
ಅವಕಾಶವಿಲ್ಲದ ತಾಣದಲ್ಲಿ ಫಲಪ್ರಾಪ್ತಿಗಾಗಿ ಪ್ರಯತ್ನಿಸಿದ ಹಾಗೆ

* * * *

## भाषान्तरपाठा:

[ ಭಾಷಾಂತರ ಪಾಠಗಳು ]

१) पाटलिपुत्रे सुदर्शनो नाम राजा अवसत् । एकस्मिन् दिवसे स: येन केनापि गीतम् श्लोकद्वयं अश्रुणोत् । तच्छ्लोकद्वयेन विद्याया: महत्वं प्रशंसितम् । तत् श्रुत्वा राजा दु:खितोऽभवत् । तस्य दु:खस्य कारणम् किमिति चेत् तस्य पुत्रा: (कामपि विद्यां शिक्षितुं नेच्छन्ति स्म) विद्याविमुखा: आसन् । ते स्वच्छन्दवर्तिनो भवितुं (इच्छन्ति स्म) ऐच्छन् । राजा अचिन्तयत्— 'कथं तान् विद्यावतो कर्तुम् शक्यते ?' इति । स विदुषां सभामेकां समाह्वयत् । विदुषां पुरत: स्वसमस्यां निहितवान् स राजा । तत्र सभायां विष्णुशर्मा

नाम विद्वानासीत्। स उत्थाय प्रोवाच— 'महाराज, दुःखस्य कारणं नास्ति। अहम् षण्मासाभ्यन्तरे भवतः पुत्रान् विद्यावतो करिष्यामि' इति। राजा तेन सह स्वपुत्रान् प्राहिणोत्। विष्णुशर्मा अध्यापयत्तान् नीतिशास्त्रम् काककूर्मादीनां कथाद्वारा।

२) वाराणस्यां सर्वकारो नाम कश्चन धनवान् आसीत्। एकदा स रात्रिसमये निद्रामग्नः आसीत्। भित्तौ सन्धि कृत्वा स्तेन एकः प्राविशत् तद्गृहम्। गृहस्य प्रांगणे रासभ एकः बन्धितो बभूव। देहलीसमीपे एकश्शुनकः विश्राम्यति स्म। गर्दभः पप्रच्छ— एकः स्तेनः गृहम् प्रविष्टोऽस्ति। त्वमपि तद्विषये जागृतो भव। किमर्थं त्वमुच्चैर्न बुक्कसि न जागृतं च करोषि यजमानम्? शुनक आह— 'मित्र, मम कर्तव्यविषये त्वं मा वादं कुरु। अस्मद्विषये यजमानस्यानादरं किं त्वं न जानीषे? प्रत्यहम् त्वं वहसि भाण्डस्य महद्भारम्। स त्वां निष्करुणः ताडयति। रक्षाम्यहम् तस्य गृहम् आप्रभातम्। मय्यपि च निष्करुणः सः। न ददाति सः पर्याप्तमाहारमावयोः। आवां तूष्णीं (मौनं) असाव। चोरः आदाय गच्छतु सर्वं वस्तु। यजमानः ज्ञास्यति महत्वमावयोः।

३) लवः कुशश्च सीतारामयोः यमलपुत्रावास्ताम्। तौ वाल्मीकेराश्रमे अजायेताम्। ऋषिः महाजागरूकतया तौ पोषयामास। स शिक्षयामास तौ सर्वासु विद्यासु। स

अध्यापयत् च तौ रामायणम् । यमलपुत्रौ कण्ठस्थं चक्रतुः तत् मधुरं अगायतां च । एकदा तौ अयोध्यामगच्छतां अगायतां च रामायणम् रामस्य (भार्या) आस्थाने । मधुरेण संगीतेन समाकृष्टो रामः ताभ्यां अमूल्यान् उपहारान् ददौ । तावपि तं सम्मान्य प्रतिनिवृत्तावाश्रमम् । वाल्मीकिः तयोः स्वागतं कृत्वोवाच च– 'युवयोः अतीव सन्तुष्टोऽस्मि' इति । युवां मम काव्यं श्रीरामस्य सम्मतं कुर्यातम् । सीता आश्लिष्यत् स्वपुत्र पप्रच्छ च रामविषयकं कुशलम् ।

४) विष्णुस्वामि नामा कश्चन ब्राह्मणः ब्रह्मस्थलेऽवसत् । तस्य चत्वारः पुत्रा आसन् । ते सकलशास्त्र परिणताः बभूवुः । तेषु प्राप्तवयस्केषु जातेषु विष्णुस्वामी ममार, तस्य भार्याऽपि सगता । ते असहायका अभवन, तेषां सम्बन्धिनः तत्सम्बन्धि सर्वं सम्पदादिकं अगृह्णन् । जीवनस्य मार्गान्तरमपश्यन् ते स्वमातामहग्रामं यज्ञस्थलं गन्तुं निर्धारितचित्ता बभूवुः । त्रासदायकान् दीर्घप्रयाणादनन्तरं ते प्राप्ताः यज्ञस्थलम् । यतः तेषां मातामही, मातामहश्च न जीवतः ततः तन्मातुलैः आश्रयं दत्तम् । गतेषु कतिपयेषु दिनेषु मातुलाश्च तान् (उदासीन) अवज्ञादृष्ट्या द्रष्टुमारभन्त । जीवनार्थं ये परावलम्बिनो भवन्ति तेषां सर्वेषां इयमेव स्थितिः प्राप्ता स्यात् ।

५) द्रविडदेशे कंची नामकं नगरमस्ति । तस्मिन्नगरे वणिक्पुत्रः कश्चित् शक्तिकुमारो नामा आसीत् । सः

Vasudevan



अष्टादशवर्षीयो बभूव। काचिच्चिन्ता उदभूत्तन्मनसि—योग्यां (कार्यकुशलां) एकां भार्यां विना सुखं नास्ति। कथं तादृशी योग्या भार्या मया अन्वेष्टव्या' इति। इतरैरन्वेषितासु स्वमनोऽभीष्टगुणान् अनवलोक्य सः ज्योतिष्कस्य रूपं धृत्वा स्वयमेव तादृशभार्यान्वेषणार्थं प्रतस्थे। एकस्मिन् वस्त्रे शालिप्रस्थं बध्वा स सर्वत्र देशे बभ्राम। तं एकं ज्योतिष्कं मत्वा अनेके जनाः स्वपुत्रीणां भविष्यमपृच्छन्। यदा यदा स सुन्दरयुवतिं पश्यति तदा तदा तां पृच्छति स्म —'सुन्दरि, किं अनेन शालिप्रस्थेन कृपया मदर्थं मिष्टान्नं पक्ष्यसि' इति। सर्वाः युवतयः तस्येमां प्रार्थनां मन्दस्मितेनैव निराकुर्वन्ति स्म। अन्ते सः कावेरीतीरस्थमेकं नगरं समागच्छत्। तत्र सः असाधारणसुन्दरीमेकां दरिद्रां युवतीमपश्यत्। सा एकस्या धात्र्याः रक्षणे आसीत्। सा तु अस्य प्रार्थनामङ्गीचकार तदर्थं च मिष्टान्नमपचत्। सः तां स्वभार्यात्वेन अचिनोत्।

६) गोदावरीनद्यास्तीरे प्रतिष्ठानं नाम राज्यमासीत्। विक्रमसेनस्य पुत्रः त्रिविक्रमसेनः तद्राज्यं अशासत् (प्रशासति स्म)। स शक्र इव शक्तिमान् भूत्वा स्वधैर्येण कीर्तिमलभत। प्रत्यहं क्षान्तिशीलो नामैको संन्यासी तस्य आस्थानम् आगत्य फलमेकं ददन्नासीत्। नृपः तत्फलमादाय कोशाधिकारिणो हस्ते ददाति स्म। एवं दश वत्सराः याताः। यथाप्रकारं संन्यासी आगत्य राज्ञे फलमयच्छत्। तस्मिन् गते कपिरेकः

Funding: Tattva Heritage Foundation,Kolkata. Digitization: eGangotri.



स्वरक्षकहस्तान्मोचयन् आस्थानं प्रविवेश। नृपः तत्फलं वानराय ददौ। यदा मर्कटः तत्फलमदशत् तदा तस्मात् एकं अनर्घं रत्नं बहिरागच्छत्। राजा तदाभरणं, गृहीत्वा कोशाधिकारिणमपृच्छत्— 'कुत्र स्थापितानि तानि फलानि यद्दत्तानि मया?' इति। कोशाधिकारी प्रत्युवाच– 'देव, प्रक्षिप्तवानहं तानि कोशागारान्तः गवाक्षद्वारेण' इति। कोशागारस्य द्वारमुद्घाट्य तानि द्रष्टुं अवदत् नृपः। कोशाधिकारी च तथैवाकरोत्। स प्रतिनिवृत्य अवोचत्– 'देव, शुष्काणि तानि फलानि। तत्राहं अपश्यम् भास्वराणि आभरणजालानि'– इति।

७) एकदा भैरवो नाम व्याधः कृष्णमृगस्य अन्वेषणाय विन्ध्याटवीं अगात्। तत्र कृष्णमृगं हत्वा तमादाय गच्छन्तं एकं भयङ्करं सूकरं ददर्श। व्याधः सूकरं प्रति शरमेकं विससर्ज सः तेन विद्धश्च। ततस्सूकरः भीकरं गर्जयित्वा व्याधस्योपरि उत्पतन् तस्य मुष्कदेशेऽताडयत्। उन्मूलो वृक्ष इव व्याधोऽपतत् भूमौ। व्याधस्य सूकरस्य च पादाघातेन सर्पोऽप्येको मृतः। स्वल्पकालानन्तरं दीर्घरवो नाम शृगालः आहारमन्विष्यन् तत्रागतः, मृतान् व्याधसूकरसर्पहरिणान् अपश्यच्च। हर्षेण तुष्टो शृगालः— 'अहो! कीदृशो मे अदृष्टः। ममाग्रतः कियानाहारो वर्तते। अत एव जनाः तद्वदन्ति यत्सुखं च दुःखं च अनिरीक्षितमागच्छति कर्मायत्तम् अत्र अदृष्टो विजयते। अहमिदं आहारं मासत्रयपर्यन्तं उपभोक्ष्यामि हर्षेण। अयम् मनुष्यः एकवासपर्यन्तं, हरिणः

Vrindavan B.V.



सूकरश्च मासद्वयपर्यन्तं भविष्यन्ति। अहमद्य शरलग्नमेव मांसमद्मि'– इत्यवोचत्। यदा सः सूकरलग्नं शरं स्पृशति तदैव स शरः शिथिलस्नायुबन्धनादुत्प्लुत्य अताडयत् शृगालं, सद्यः शृगालोऽपि मृतः। अत्रापि अदृष्टस्यैव जयः।

८) यमुनानदीतटे ब्रह्मस्थलो नाम ब्राह्मणानां अग्रहारमेकमासीत्। तत्र वेदपारंगतः अग्निस्वामी नाम ब्राह्मणोऽवसत् तस्य मन्दारवती नाम्नी एका पुत्री आसीत्। देवताशक्तिसम्पन्नानां सृष्टिसमये उपयुज्यमानां सर्वां स्वकलां उपयोज्य सृष्टिकर्ता तां असृजत्। प्राप्तवयस्कायां तस्यां तुल्यसामर्थ्याः त्रयो ब्राह्मणयुवकाः तत्रागच्छन् कन्याकुब्जात्। तेषु एकैकोऽपि मन्दारवत्याः पाणिग्रहणकामा आसन्। अग्निस्वामिनस्तु अयं निर्धार आसीत्– तेषु एकस्मै पुत्री देया विवाहविधिना इति। एकस्मै सा दीयते चेत् शिष्टौ द्वावपि आत्महत्यां करिष्यन्तीति भयेन सोऽवदत्तान् 'पुत्र्याः तीर्मानपर्यन्तं त्रिभिरपि प्रतीक्षणं कर्तव्यम्' इति। एवं अङ्गीचक्रुः ते त्रयोऽपि ब्राह्मणकुमाराः। चकोरव्रतमङ्गीकृत्य ते तस्मिन्नग्निस्वामिगृहे एवातिष्ठन्। तदनन्तरम् एकस्मिन् दिने सहसा मन्दारवती ज्वरपीडिता, मृता च। ते ब्राह्मणतरुणाः तीव्रेण शोकेन सन्तप्ता अभवन्। तेष्वेकः मन्दारवत्याः दग्धभस्म एव स्वशय्यां कृत्वा श्मशाने एव स्थितः। द्वितीयः मन्दारवत्याः अस्थीनि गृहीत्वा गंगायां विसर्जयितुं गतः। तृतीयः संन्यासी भूत्वा देशे सर्वत्र अभ्रमत्।

Narayanan